|| ಓಂ ಶ್ರೀ ದುರ್ಗಾಯೈ ನಮಃ ||

ಶ್ರೀ ಜಯಚಾಮರಾಜೇಂದ್ರ ಗ್ರಂಥರತ್ನಮಾಲಾ

(ಸಂಖ್ಯೆ—೫೭)

# ಮಾರ್ಕಂಡೇಯ ಪುರಾಣಂ

(ಕನ್ನಡ ಅನುವಾದ ಸಹಿತ)

ಸಂಚಿಕೆ ೨

ಅನುವಾದಕ

ಆಸ್ಥಾನವಿದ್ವಾನ್, ಪಾಟಣಕರ ಚಂದ್ರಶೇಖರಭಟ್ಟ

ಮೈಸೂರು

ಶ್ರೀ ಪಂಚಾಚಾರ್ಯ ಎಲೆಕ್ಟ್ರಿಕ್ ಪ್ರೆಸ್

1954

# ಪ್ರಸ್ತಾವನೆ

ಮಹರ್ಷಿ ವೇದವ್ಯಾಸಮುನಿ ರಚಿತವಾದ ಮಾರ್ಕಂಡೇಯ ಮಹಾಪುರಾಣದ ಕನ್ನಡ ಅನುವಾದ ರಚನೆಯನ್ನು ಮುಂದುವರೆಸಿಕೊಂಡು ಬಂದುದರ ಪರಿಣಾಮವಾಗಿ ಅದರ ಮೂರನೆಯ ಸಂಚಿಕೆಯನ್ನೀಗ ವಾಚಕರ ಮುಂದಿಡಲು ಅತ್ಯಂತ ಕುತೂಹಲಿಯಾಗಿದ್ದೇನೆ.

ಭರತಖಂಡದ ದಿವ್ಯಭವಿಷ್ಯವನ್ನು ರೂಪಿಸುವ ಕೂರ್ಮಮೂರ್ತಿಯ ಸನ್ನಿವೇಶವನ್ನು ವರ್ಣಿಸುವ ಐವತ್ತೈದನೆಯ ಅಧ್ಯಾಯದಿಂದ ಪ್ರಾರಂಭಹೊಂದಿದ ಈ ಸಂಚಿಕೆಯಲ್ಲಿ ಕ್ರಮವಾಗಿ ಸ್ವಾಯಂಭುವ–ಸ್ವಾರೋಚಿಷ-ಔತ್ತಮ–ತಾಮಸ–ರೈವತ–ಚಾಕ್ಷುಷ–ವೈವಸ್ವತ ಮತ್ತು ಸಾವರ್ಣಿಕ ಮನುರಾಜರ ಮನ್ವಂತರ ಚರಿತ್ರೆಗಳು ವರ್ಣಿಸಲ್ಪಟ್ಟಿವೆ.

ಪಾವನವಾಗಿದ್ದ ಮನ್ವಂತರಚರಿತ್ರೆಯ ಶ್ರವಣವು ಪುಣ್ಯ–ಚಿತ್ತಶುದ್ಧಿ–ಉತ್ತಮಸಂಸ್ಕಾರಗಳನ್ನು ಕೊಡುವಂತೆಯೇ ಕಥಾದೃಷ್ಟಿಯಿಂದ ಅಘಟಿತಘಟನಾಮಯವೂ ಅದ್ಭುತವೂ ಆದ ಆ ಚರಿತ್ರೆಯ ಪರಿಶೀಲನೆಯು ಚಿತ್ತಕ್ಕೆ ಚಮತ್ಕಾರವನ್ನು ಉಂಟುಮಾಡುವುದರಲ್ಲಿ ಸಂದೇಹವಿಲ್ಲ. ಮನ್ವಂತರಾಧಿಪತಿ–ಯೆನಿಸುವ ಉಚ್ಚಪದವಿಯನ್ನು ಹೊಂದುವ ಮಹಾನುಭಾವರ ಜನ್ಮವು ಆಶ್ಚರ್ಯಗೊಳಿಸುವಂತಹುದಾಗಿರುವುದು.

ಸ್ವಾರೋಚಿಷನೆಂಬ ಮನುರಾಜನು ಕಲಿ ಎಂಬ ಗಂಧರ್ವ, ವರೂಥಿನೀ ಎಂಬ ಅಪ್ಸರಾಂಗನೆ—ಇವರಲ್ಲಿ ಜನಿಸಿದ ಸ್ವರೋಚಿ ಎಂಬುವನ ಪುತ್ರನು. ದೇಶದರ್ಶನ ಕುತೂಹಲಿಯಾದ ವಿಪ್ರನೋರ್ವನು ಪಾದುಕಾಸಿದ್ಧಿಯಬಲದಿಂದ ಸಂಜೆಯೊಳಗೆ ಹಿಂತಿರುಗಿ ಬರುವೆನೆಂಬ ನಂಬಿಕೆಯಿಂದ ಹಿಮಾಚಲಕ್ಕೆ ಹೋಗಿ ಅಲ್ಲಲ್ಲಿ ಸುಂದರಗಿರಿ ಸನ್ನಿವೇಶಗಳನ್ನು ನೋಡಿ ಹಿಗ್ಗುತ್ತಿರುವಷ್ಟರಲ್ಲಿ ಪಾದಸಿದ್ಧಿ-ಯನ್ನು ಕೊಟ್ಟಿರುವ ರಸಲೇಪನವನ್ನು ಕಳೆದುಕೊಂಡು ಸಂಜೆಯೊಳಗೆ ಮನೆಯನ್ನು ಸೇರಲು ಅಶಕ್ತನಾಗುವನು. ಮತ್ತು ಸಂಧ್ಯಾಕಾಲದ ಕರ್ಮಾನು-ಷ್ಠಾನದ ಲೋಪಕ್ಕೆ ಭಯಪಟ್ಟು ಚಿಂತಾಗ್ರಸ್ತನಾಗಿರುವನು. ಆಗ ವರೂಥಿನಿ ಎಂಬ ಅಪ್ಸರಾಂಗನೆಯು ಅವನನ್ನು ನೋಡಿ ರೂಪ-ಲಾವಣ್ಯಗಳಿಗೆ ಬೆರಗಾಗಿ ಅವನನ್ನು ಕಾಮಿಸುವಳು. ಲೀಲಾವಿಲಾಸತರಂಗಗಳಿಂದ ಮೋಹಗೊಳಿಸಿ

ರತಿಸುಖ ಪ್ರಪಂಚಕ್ಕೆ ತಂದು ಧರ್ಮಪಥವನ್ನು ಕಣ್ಮರೆಮಾಡುವ ಅಪ್ಸರಾಂಗನೆಯೆಲ್ಲಿ! ಒಂದು ಹೊತ್ತಿನ ಕರ್ಮಾನುಷ್ಠಾನಲೋಪಕ್ಕೆ ಅಂಜುವ ಅಚಲ ಶ್ರದ್ಧಾವಂತನಾದ ಧಾರ್ಮಿಕವಿಪ್ರನೆಲ್ಲಿ! ಕಡೆಗೂ ವರೂಥಿನಿಯ ಪ್ರಾರ್ಥನೆಯು ವಿಪ್ರನಲ್ಲಿ ಸಾರ್ಥಕವಾಗದು.

**ಪರಸ್ತ್ರಿಯಂ ನಾಭಿಲಷೇತ್ ಇತ್ಯೂಚುರ್ಗುರವೋ ಮಮ ।**
**ತೇನ ತ್ವಾಂ ನಾಭಿವಾಞ್ಛಾಮಿ ಕಾಮಂ ವಿಲಪ ಶುಷ್ಯ ವಾ ॥**

" ಪರಸ್ತ್ರೀಸಂಗವನ್ನು ಆಶಿಸಲಾಗದು " ಎಂದು ನನಗೆ ಗುರೂಪದೇಶವಿರುವುದರಿಂದ ನಿನ್ನಲ್ಲಿ ನಾನು ಇಷ್ಟವನ್ನು ಹೊಂದಲಾರೆನು. ನೀನು ಎಷ್ಟೇ ಕೇಳು, ಗೋಳಿಡು, ಅಳು ಅಥವಾ ಹಾಳಾಗು ಎಂದು ವಿಪ್ರನು ಆಕೆಯನ್ನು ಧಿಕ್ಕರಿಸುವನು. ಮುಂದೆ ವಿಪ್ರನು ಗತ್ಯಂತರವಿಲ್ಲದೆ ಅನನ್ಯಭಾವದಿಂದ ಅನುಷ್ಠಾನಲೋಪವಿಲ್ಲದ ಹಾಗೆ ಕರುಣಿಸಬೇಕೆಂದು ಅಗ್ನಿಯನ್ನು ಪ್ರಾರ್ಥಿಸಲು ಅಗ್ನಿಯು ತನ್ನ ತೇಜಸ್ಸು-ಪ್ರಭಾವಗಳನ್ನು ಕರುಣಿಸುವನು. ಆಗಿನ ಉಜ್ವಲರೂಪವನ್ನು ಕಂಡ ವರೂಥಿನಿಗೆ ಮಾತ್ರ ಕಾಮಪೀಡೆಯು ದ್ವಿಗುಣವಾಯಿತು. ವಿಪ್ರನು ಕ್ಷಣಮಾತ್ರದಲ್ಲಿ ಮನೆಗೆ ಸೇರಿದನು.

ಇತ್ತ ಕಲಿ ಎಂಬ ಗಂಧರ್ವನು ಚಿರಕಾಲದಿಂದ ವರೂಥಿನಿಯಲ್ಲಿ ಆಶೆ ತೋರಿಸಿ ವಿಫಲನಾಗಿದ್ದನು. ಈ ಸಮಯವನ್ನು ಸಾರ್ಥಕಪಡಿಸಿಕೊಳ್ಳಲು ಹವಣಿಸಿದ ಕಲಿಗಂಧರ್ವನು ಆ ವಿಪ್ರನ ರೂಪದಿಂದ ವರೂಥಿನಿಗೆ ಕಾಣಿಸಿಕೊಂಡನು. ಮತ್ತೆ ತನ್ನ ಮನಮೋಹಕ ವಿಪ್ರನು ಅಲ್ಲಿಗೆ ಬಂದಂತೆ ಗಂಧರ್ವನ ವಂಚನೆಯಿಂದ ಅರಿತ ವರೂಥಿನಿಯು ದೈನ್ಯದಿಂದ ಅವನ ಬಳಿಯಲ್ಲಿ ತನ್ನ ಮನೋರಥವನ್ನು ಈಡೇರಿಸುವಂತೆ ಕೇಳಿಕೊಂಡಳು. ತರುವಾಯ ವಿಪ್ರನ ಉಜ್ವಲರೂಪವನ್ನು ಧ್ಯಾನಿಸುತ್ತ ಗಂಧರ್ವನ ಸಂಗ ಹೊಂದಿದ ವರೂಥಿನಿಯು ಪುತ್ರನನ್ನು ಪ್ರಸವಿಸಿದಳು. ಅಗ್ನಿಯಂತೆ ತೇಜಸ್ವಿಯಾಗಿ ಜನಿಸಿದ ಆ ಪುತ್ರನೇ ಸ್ವರೋಚಿಯು.

ಸ್ವರೋಚಿಯು ತಾರುಣ್ಯದಲ್ಲಿ ಪ್ರೇಯಸಿರೊಡನೆ ವಿಹರಿಸುತ್ತ ಪ್ರಣಯ ಕೇಳಿಗಳಲ್ಲಿ, ಕ್ರೀಡಾವಿನೋದಗಳಲ್ಲಿ ತೊಡಗಿದುದು ಸ್ಪೃಹಣೀಯವಾಗಿತ್ತು. ಇದನ್ನು ಚಕ್ರವಾಕಪಕ್ಷಿಯು ವರ್ಣಿಸುತ್ತ ಈ ವಿಧದ ದಾಂಪತ್ಯಪ್ರೇಮವು ಬಹು ವಿರಳವೆಂದು ಹೇಳಿದೆ.

**ಅಭೀಷ್ಟಾ ಕಸ್ಯಚಿತ್ಕಾನ್ತಾ ಕಾನ್ತಃ ಕಸ್ಯಾಶ್ಚಿದೀಪ್ಸಿತಃ ।**
**ಪರಸ್ಪರಾನುರಾಗಾಢ್ಯಂ ದಾಮ್ಪತ್ಯಮತಿದುರ್ಲಭಮ್ ॥**

**ಧನ್ಯೋಽಯಂ ದಯಿತಾಭೀಷ್ಟೋ ಹ್ಯೇತಾಶ್ಚಾಸ್ಯಾತಿವಲ್ಲಭಾಃ ।**
**ಪರಸ್ಪರಾನುರಾಗೋ ಹಿ ಧನ್ಯಾನಾಮೇವ ಜಾಯತೇ ॥**

ರೈವತಮನ್ವಂತರ ಚರಿತ್ರೆಯಲ್ಲಿ ಪುತ್ರವಂತಮಾನವರ ಮನವೊಪ್ಪುವ ಒಂದು ಸನ್ನಿವೇಶವು ಹೃದಯಂಗಮವಾಗಿದೆ. ಋತವಾಕ್ ಎಂಬ ಮುನಿಯು ತನಗೆ ಹುಟ್ಟಿದ ದುಷ್ಪುತ್ರನ ವಿಷಯವಾಗಿ ಖೇದದಿಂದ ಈ ರೀತಿ ಹೇಳುತ್ತ—

**ಅಪುತ್ರತಾ ಮನುಷ್ಯಾಣಾಂ ಶ್ರೇಯಸೇ ನ ಕುಪುತ್ರತಾ ।**
**ಕುಪುತ್ರೋ ಹೃದಯಾಯಾಸಂ ಸರ್ವದಾ ಕುರುತೇ ಪಿತುಃ ॥**

ಮಾನವರಿಗೆ ಕುಪುತ್ರನು ಹುಟ್ಟಿ ಸಂತತವಾಗಿ ಚಿಂತಿಸುವಂತಹ ದುರ್ದಶೆ-ಗಿಂತಲೂ ಸಂತತಿಯಿಲ್ಲದೆ ಅಪುತ್ರರಾಗಿರುವುದು ಮೇಲು ಎಂದು ಕೊರಗುವನು. ಆದರೆ ರೇವತೀನಕ್ಷತ್ರದೋಷದಿಂದ ಆ ದೋಷವು ಸಂಭವಿಸಿದುದು ವೇದ್ಯವಾಗಿ ಋತವಾಕ್‌ಮುನಿಯ ಅಮೋಘಶಾಪದಿಂದ ರೇವತೀನಕ್ಷತ್ರವು ಭೂಪತನವಾಗು-ವುದು. ಅದರ ಪರಿಣಾಮವಾಗಿ ಆವಿರ್ಭವಿಸಿದ ರೇವತಿ ಎಂಬಾಕೆಯಲ್ಲಿ ದುರ್ಗ-ಮರಾಜನ ಪುತ್ರನಾಗಿ ಜನಿಸಿದವನು ರೈವತಮನುವಾಗುವನು.

ಹೀಗೆ ಪ್ರತಿಯೊಂದು ಚರಿತ್ರೆಯಲ್ಲಿ ಒಂದಲ್ಲ, ಮತ್ತೊಂದು ವಿಧದಿಂದ ಪ್ರತಿಯೊಂದು ವ್ಯಕ್ತಿಯ ಜೀವನ ಸನ್ನಿವೇಶವನ್ನು ಪ್ರತಿಬಿಂಬಿಸುವ ಘಟನೆಗಳು ಸೇರಿರುತ್ತವೆ. ಕಡೆಯಲ್ಲಿ ಸಾವರ್ಣಿಕಮನ್ವಂತರ ಚರಿತ್ರೆಯ ಪೀಠಿಕೆಯಾಗಿ ಸಾವರ್ಣಿಕನ ಪೂರ್ವಜನ್ಮವೃತ್ತಾಂತದಲ್ಲಿ ಮುಖ್ಯವಾದ ಶ್ರೀದೇವಿಯ ಅನು-ಗ್ರಹವನ್ನು ವರ್ಣಿಸುವ ನೆಪದಿಂದ ಸಂಪೂರ್ಣ ದೇವೀಮಾಹಾತ್ಮ್ಯವು ಸೇರಿ-ಕೊಂಡಿದೆ.

ದೇವಿಯ ಮಾಹಾತ್ಮ್ಯದಲ್ಲಿ ಮಧು–ಕೈಟಭಸಂಹಾರ, ಮಹಿಷಾಸುರ-ಮರ್ದನ ಮತ್ತು ಶುಂಭ–ನಿಶುಂಭ ವಧ—ಎಂದು ಮೂರು ಚರಿತ್ರೆಗಳಿವೆ. ದೇವತೆಗಳು ದುಷ್ಟದಾನವರನ್ನು ದಮನಮಾಡಲಾಗದೆ ಸ್ವರ್ಗಸುಖಭ್ರಷ್ಟರಾ-ಗಿರುವ ಸಮಯದಲ್ಲಿ ದೇವಿಯನ್ನು ಸ್ತುತಿಮಾಡಿದಾಗ ದೇವಿಯು ಬಗೆಬಗೆಯ ರೂಪಗಳಿಂದ ಕಾಣಿಸಿಕೊಂಡುದನ್ನು ದೇವಿಯ ಉತ್ಪತ್ತಿಯೆನ್ನುವರು. ತಾತ್ತ್ವಿಕ-ವಾಗಿ ದೇವಿಯು ಜನ್ಮವಿಲ್ಲದವಳು. ಬ್ರಹ್ಮನ ಸ್ತುತಿಯಿಂದ ಪ್ರಸನ್ನಳಾದ

ಯೋಗನಿದ್ರಾರೂಪಿಣಿಯಾದ ದೇವಿಯು ವಿಷ್ಣುನೇತ್ರವೆಂಬ ಮಂದಿರವನ್ನು ಬಿಟ್ಟು ಬಂದು ಅನುಗ್ರಹವನ್ನೀಯಲು ಮಹಾವಿಷ್ಣುಪರಮಾತ್ಮನು ಆ ದಾನವ-ರನ್ನು ಸಂಹರಿಸುವನು. ದೇವತೆಗಳಲ್ಲಿ ಪ್ರಸರಿಸಿದ ಶಕ್ತಿಯ ಅಂಶಗಳು ಒಂದುಕಡೆ ಸಮಷ್ಟಿಯಾಗಿ ಸೇರಿ ದೇವಿಯು ಮೂರ್ತೀಭವಿಸಿ ಮಹಿಷಾಸುರನನ್ನು ವಧಿಸುವಳು. ಹಾಗು ಶುಂಭ-ನಿಶುಂಭರಮನಮೋಹಕ ರೂಪವನ್ನು ತೆಗೆದು-ಕೊಂಡು ಬಂದು " ನಾನು ಹಿಂದೆ ಕೈಗೊಂಡ ಪ್ರತಿಜ್ಞೆಯಂತೆ—

**ಯೋ ಮಾಂ ಜಯತಿ ಸಙ್ಗ್ರಾಮೇ ಯೋ ಮೇ ದರ್ಪಂ ವ್ಯಪೋಹತಿ ।**
**ಯೋ ಮೇ ಪ್ರತಿಬಲೋ ಲೋಕೇ ಸ ಮೇ ಭರ್ತಾ ಭವಿಷ್ಯತಿ ॥**

ನನ್ನನ್ನು ಸಂಗ್ರಾಮದಲ್ಲಿ ಗೆದ್ದ ವೀರನು ನನಗೆ ಪತಿಯಾಗುವನು " ಎಂದು ಪ್ರಚಾರಮಾಡಿದ ವಾಣಿಯನ್ನು ಕೇಳಿ ನಿಖಿಲೈಶ್ವರ್ಯಮದಮತ್ತರೂ ರತ್ನಭುಜ-ರೆಂಬ ಅಹಂಕಾರಾರೂಢರೂ ಆದ ನಿಶುಂಭ-ಶುಂಭರು ಯುದ್ಧಕ್ಕೆ ಬಂದು ಮರಣ-ಹೊಂದುವರು. ಇವರಿಂದ ದೇವಿಯ ಸರ್ವಶಕ್ತಿ-ಸರ್ವಾತ್ಮತೆಗಳು ವ್ಯಕ್ತಿ ಹೊಂದುವುವು.

ಈ ದೇವೀಮಾಹಾತ್ಮ್ಯವು ದೇವಿಯನ್ನು ಉಪಾಸನಮಾಡುವ ಪಾವನವೂ ಸ್ತುತಿರೂಪವೂ ಆದ ವಾಙ್ಮಯವು. ಇದು ಜಪ, ಪುರಶ್ಚರಣ, ಹೋಮ ಮುಂತಾದ ವಿಧಾನಗಳಿಂದ ಭಕ್ತರಿಗೆ ಇಷ್ಟಸಿದ್ಧಿಯನ್ನು ಉಂಟುಮಾಡುವ ಮಂತ್ರವಿದ್ಯೆಯ ಸ್ವರೂಪವಾಗಿ ಶಿಷ್ಯರಲ್ಲಿ ಪ್ರಖ್ಯಾತಿಯನ್ನು ಹೊಂದಿದೆ.

ಇಂತು ಅನೇಕ ವಿಷಯಗಳನ್ನೊಳಗೊಂಡು ತೊಂಭತ್ತನೆಯ ಅಧ್ಯಾಯವು ಪೂರ್ಣವಾಗಿ ಈ ಸಂಚಿಕೆಯು ಮುಕ್ತಾಯವಾಗಿರುವುದು.

ಆಳುವ ಮಹಾಸ್ವಾಮಿಯವರು **ಶ್ರೀ ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್ ಜಿ.ಸಿ.ಬಿ, ಜಿ.ಸಿ.ಎಸ್.ಐ.,** ರವರ ಆಜ್ಞೆಯಂತೆ ಸಂಸ್ಕೃತದಲ್ಲಿದ್ದ ಈ ಗ್ರಂಥವನ್ನು ಕನ್ನಡಿಗರ ತಿಳಿವಳಿಕೆಗಾಗಿ ಕನ್ನಡಕ್ಕೆ ಪರಿವರ್ತನ ಮಾಡಿರುತ್ತೇನೆ. ಆಸ್ತಿಕಶಿರೋಮಣಿಗಳಾದ ಮಹಾಪ್ರಭುಗಳವರು ಪವಿತ್ರ ವಾಙ್ಮಯದ ಪ್ರಸಾರದಿಂದ ಸರಸ್ವತೀದೇವಿಯ ಉಪಾಸಕರಾಗಿ ಲೋಕಕ್ಕೆ ಮಹೋಪಕಾರವನ್ನು ಮಾಡುತ್ತ ಭರತಖಂಡದ ರಾಜಾಧಿರಾಜರಲ್ಲಿ ಅದ್ವಿತೀಯ-ರೆಂದು ಖ್ಯಾತಿಗಳಿಸಿರುವರು. ಕರ್ಣಾಟಕದ ಪ್ರಜಾಕೋಟಿಯ ಭಾಗ್ಯದೇವತೆ-ಯಂತಿರುವ ಮಹಾಸ್ವಾಮಿಯವರು ಸತ್ಪತ್ನೀ-ಪುತ್ರರತ್ನ-ಪರಿವಾರಸಮೇತರಾಗಿ

ದೀರ್ಘಾಯುರಾರೋಗ್ಯಾದಿ ಸಕಲ ಸನ್ಮಂಗಳಗಳನ್ನು ಚಿರಕಾಲ ಅನುಭವಿಸು-ವಂತೆ ಕರುಣಿಸಲೆಂದು ಶ್ರೀ ಚಾಮುಂಡಾಂಬಿಕೆಯನ್ನು ಅನನ್ಯಭಕ್ತಿಯಿಂದ ಪ್ರಾರ್ಥಿಸುತ್ತೇನೆ.

ಹೀಗೆ ಈ ಗ್ರಂಥವು ಪ್ರಕಾಶಕ್ಕೆ ಬಂದು ಸಜ್ಜನರ ಸೇವೆಮಾಡಲು ಅವಕಾಶಮಾಡಿಕೊಟ್ಟ ಮಹನೀಯರಲ್ಲಿ ಕೃತಜ್ಞತೆಯನ್ನು ಅರ್ಪಿಸುತ್ತ ವಾಚಕರ ಹೃದಯದಲ್ಲಿ ಜ್ಞಾನಪ್ರಕಾಶವನ್ನು ಬೀರುವ ಈ ಗ್ರಂಥದಿಂದ ರಾಜಮನೆತನದ ಕೀರ್ತಿಯು ಆಚಂದ್ರಾರ್ಕವಾಗಿ ಉಜ್ವಲವಾಗಿರಲೆಂದು ಕೋರುತ್ತೇನೆ.

ಮೈಸೂರು
ತಾ॥ 9—1—1954

ಅನುವಾದಕ
ಪಾಟಣಕರ ಚಂದ್ರಶೇಖರಭಟ್ಟ

|| ಓಂ ಶ್ರೀ ದುರ್ಗಾಯೈ ನಮಃ ||

# ಮಾರ್ಕಂಡೇಯ ಪುರಾಣಂ

## ಅಷ್ಟಸಪ್ತತಿತಮೋ ಧ್ಯಾಯಃ

### (ಮಧು-ಕೈಟಭವಧಃ)

**ಮಾರ್ಕಣ್ಡೇಯ ಉವಾಚ :—**

**ಸಾವರ್ಣಿಃ ಸೂರ್ಯತನಯೋ ಯೋ ಮನುಃ ಕಥ್ಯತೇಽಷ್ಟಮಃ ।**
**ನಿಶಾಮಯ ತದುತ್ಪತ್ತಿಂ ವಿಸ್ತರಾದ್ಗದತೋ ಮಮ ||೧||**

**ಮಹಾಮಾಯಾನುಭಾವೇನ ಯಥಾ ಮನ್ವನ್ತರಾಧಿಪಃ ।**
**ಸ ಬಭೂವ ಮಹಾಭಾಗಸ್ಸಾವರ್ಣಿಸ್ತನಯೋ ರವೇಃ ||೨||**

---

## ಎಪ್ಪತ್ತೆಂಟನೆಯ ಅಧ್ಯಾಯ

ಮಾರ್ಕಂಡೇಯ ಮುನಿಯು ಹೇಳಿದನು :—

೧. ಸೂರ್ಯದೇವನ ಪುತ್ರನಾದ ಸಾವರ್ಣಿ ಎಂಬುವನು ಎಂಟನೆಯ ಮನುವೆಂದು ಹೇಳಲ್ಪಟ್ಟಿರುವನು. ಆ ಸಾವರ್ಣಿಮನುವಿನ ಉತ್ಪತ್ತಿಚರಿತ್ರೆಯನ್ನು ವಿಸ್ತಾರವಾಗಿ ಹೇಳುವ ನನ್ನ ವಚನವನ್ನು ಕೇಳು.

೨. ಮಹಾಭಾಗ್ಯವಂತನೂ, ಸೂರ್ಯದೇವನ ಪುತ್ರನೂ ಆದ ಆ ಸಾವರ್ಣಿಮನುವು ಜಗದಂಬೆಯಾದ ಮಹಾಮಾಯೆಯ ಪ್ರಭಾವದಿಂದ ಹೇಗೆ ಮನ್ವಂತರಾಧಿಪ ಪದವಿಗೆ ಬಂದನೋ ಅದನ್ನು ವಿವರಿಸುವೆನು.

ಸ್ವಾರೋಚಿಷೇಽನ್ತರೇ ಪೂರ್ವಂ ಚೈತ್ರವಂಶಸಮುದ್ಭವಃ ।
ಸುರಥೋ ನಾಮ ರಾಜಾಭೂತ್ಸಮಸ್ತೇ ಕ್ಷಿತಿಮಣ್ಡಲೇ ॥೩॥

ತಸ್ಯ ಪಾಲಯತಃ ಸಮ್ಯಕ್ ಪ್ರಜಾಃ ಪುತ್ರಾನಿವೌರಸಾನ್ ।
ಬಭೂವುಃ ಶತ್ರವೋ ಭೂಪಾಃ ಕೋಲಾವಿಧ್ವಂಸಿನಸ್ತದಾ ॥೪॥

ತಸ್ಯ ತೈರಭವದ್ಯುದ್ಧಮತಿಪ್ರಬಲದಣ್ಡಿನಃ ।
ನ್ಯೂನೈರಪಿ ಸ ತೈರ್ಯುದ್ಧೇ ಕೋಲಾವಿಧ್ವಂಸಿಭಿರ್ಜಿತಃ ॥೫॥

ತತಃ ಸ್ವಪುರಮಾಯಾತೋ ನಿಜದೇಶಾಧಿಪೋಽಭವತ್ ।
ಆಕ್ರಾನ್ತಃ ಸ ಮಹಾಭಾಗಸ್ತೈಸ್ತದಾ ಪ್ರಬಲಾರಿಭಿಃ ॥೬॥

---

೩. ಪೂರ್ವಕಾಲದಲ್ಲಿ ಸ್ವಾರೋಚಿಷವೆಂಬ ಮನ್ವಂತರದಲ್ಲಿ ಚೈತ್ರನೆಂಬ ಒಬ್ಬ ರಾಜನ ವಂಶದಲ್ಲಿ ಜನಿಸಿದ ಸುರಥ ಎಂಬ ನಾಮಾಂಕಿತನಾದ ರಾಜನು ಸಮಸ್ತ ಭೂಮಂಡಲಕ್ಕೆ ಅಧಿಪತಿಯಾಗಿದ್ದನು.

೪. ಆ ಸುರಥಮಹಾರಾಜನು ತನ್ನ ಔರಸಪುತ್ರರಂತೆ ಪ್ರಜೆಗಳನ್ನು ಪಾಲಿಸುತ್ತಿರಲು ಆಗ ಬ್ರಾಹ್ಮಣಾದಿ ವರ್ಣವಿಧ್ವಂಸಕರಾದ ರಾಕ್ಷಸಯೋನಿಯ ಕೆಲವರು ರಾಜರು ಸುರಥರಾಜನ ಶತ್ರುಗಳಾಗಿ ಬಂದರು.

೫. ಹೆಚ್ಚು ಸೈನ್ಯಬಲದಿಂದ ಕೂಡಿದ ಸುರಥರಾಜನಿಗೆ ಶತ್ರುರಾಜರ ಸಂಗಡ ಯುದ್ಧವು ನಡೆಯಿತು. ಆಗ ಶಕ್ತಿ-ಸಾಮರ್ಥ್ಯಗಳಲ್ಲಿ ತನಗಿಂತಲೂ ಕಡಿಮೆಯಾಗಿದ್ದರೂ ನೀಚಸ್ವಭಾವದ ಶತ್ರುಗಳಿಂದ ಸುರಥರಾಜನು ಸೋತು-ಹೋದನು.

೬. ತರುವಾಯ ಆ ಪ್ರಬಲರಾದ ಶತ್ರುಗಳಿಂದ ಆಕ್ರಮಿಸಲ್ಪಟ್ಟವ-ನಾದರೂ ಮುಂದೆ ಮಹಿಮೆಯನ್ನು ಹೊಂದುವ ಮಹಾಭಾಗ್ಯಶಾಲಿಯಾದ ಸುರಥನು ತನ್ನ ನಗರಕ್ಕೆ ಬಂದು ತನ್ನ ದೇಶವನ್ನು ಮಾತ್ರ ಆಳಿಕೊಂಡು ರಾಜನಾಗಿದ್ದನು.

ಅಮಾತ್ಯೈರ್ಬಲಿಭಿರ್ದುಷ್ಟೈರ್ದುರ್ಬಲಸ್ಯ ದುರಾತ್ಮಭಿಃ ।
ಕೋಶೋ ಬಲಂ ಚಾಪಹೃತಂ ತತ್ರಾಪಿ ಸ್ವಪುರೇ ತತಃ ॥೭॥

ತತೋ ಮೃಗಯಾವ್ಯಾಜೇನ ಹೃತಸ್ವಾಮ್ಯಃ ಸ ಭೂಪತಿಃ ।
ಏಕಾಕೀ ಹಯಮಾರುಹ್ಯ ಜಗಾಮ ಗಹನಂ ವನಮ್ ॥೮॥

ಸ ತತ್ರಾಶ್ರಮಮದ್ರಾಕ್ಷೀದ್ದ್ವಿಜವರ್ಯಸ್ಯ ಮೇಧಸಃ ।
ಪ್ರಶಾನ್ತಶ್ವಾಪದಾಕೀರ್ಣಂ ಮುನಿಶಿಷ್ಯೋಪಶೋಭಿತಮ್ ॥೯॥

ತಸ್ಥೌ ಕಂಚಿತ್ಸ ಕಾಲಂ ಚ ಮುನಿನಾ ತೇನ ಸತ್ಕೃತಃ ।
ಇತಶ್ಚೇತಶ್ಚ ವಿಚರಂಸ್ತಸ್ಮಿನ್ಮುನಿವರಾಶ್ರಮೇ ॥೧೦॥

---

೭. ತನ್ನ ಪುರದಲ್ಲಿಯೂ ನೀಚಸ್ವಭಾವವುಳ್ಳವರೂ, ತಮ್ಮ ಮರ್ಯಾದೆಯನ್ನು ಉಲ್ಲಂಘಿಸುವವರೂ ಮತ್ತು ಬಲಿಷ್ಠರೂ ಆದ ಮಂತ್ರಿಗಳಿಂದ ಶತ್ರುಗಳಿಗೆ ಸೋತು ದುರ್ಬಲನಂತಾದ ಸುರಥರಾಜನ ಭಂಡಾರ, ಸೈನ್ಯಸಂಪತ್ತುಗಳು ಅಪಹರಿಸಲ್ಪಟ್ಟುವು.

೮. ತರುವಾಯ ಎಲ್ಲೆಡೆಗಳಲ್ಲಿಯೂ ಪ್ರಭುತ್ವವನ್ನು ಕಳೆದುಕೊಂಡಿರುವ ಆ ಸುರಥನು ಬೇಟೆಯಾಡುವ ನೆಪದಿಂದ ಏಕಾಕಿಯಾಗಿ ಕುದುರೆಯನ್ನೇರಿ ಸಾಮಾನ್ಯವಾಗಿ ಪ್ರವೇಶಮಾಡಲಾಗದ ಗಹನವನಕ್ಕೆ ಹೋದನು.

೯. ಎಲೈ ದ್ವಿಜೋತ್ತಮನಾದ ಕ್ರೌಷ್ಟುಕಿಯೇ! ಸುಸಂಸ್ಕೃತನಾದ ಸುರಥರಾಜನು ಆ ವನದಲ್ಲಿ ಸ್ವಾಭಾವಿಕವೈರವನ್ನು ಬಿಟ್ಟು ಶಾಂತವಾದ ಮೃಗಗಳಿಂದ ಕೂಡಿರುವುದೂ ಮತ್ತು ಅನೇಕ ಮುನಿಕುಮಾರರಿಂದ ಶೋಭಿಸಲ್ಪಟ್ಟಿರುವುದೂ ಆದ ಸುಮೇಧ ಎಂಬ ಋಷಿಯ ಆಶ್ರಮವನ್ನು ಕಂಡನು.

೧೦. ಅಲ್ಲಿ ಆ ಸುಮೇಧ ಮುನಿಯಿಂದ ರಾಜಗೌರವದಿಂದ ಸತ್ಕರಿಸಲ್ಪಟ್ಟ ಸುರಥರಾಜನು ಕುತೂಹಲದಿಂದ ಅತ್ತಿತ್ತ ತಿರುಗಾಡುತ್ತ ಮುನಿವರ್ಯನ ಆಶ್ರಮದ ಬಳಿಯಲ್ಲಿ ಕೆಲವುಕಾಲ ವಾಸಮಾಡಿದನು.

ಸೋಽಚಿನ್ತಯತ್ತದಾ ತತ್ರ ಮಮತ್ವಾಕೃಷ್ಟಮಾನಸಃ ||೧೧||

ಮತ್ಪೂರ್ವೈಃ ಪಾಲಿತಂ ಪೂರ್ವಂ ಮಯಾ ಹೀನಂ ಪುರಂ ಹಿ ತತ್ !
ಮದ್ಭೃತ್ಯೈಸ್ತೈರಸದ್ವೃತ್ತೈರ್ಧರ್ಮತಃ ಪಾಲ್ಯತೇ ನ ವಾ ||೧೨||

ನ ಜಾನೇ ಸ ಪ್ರಧಾನೋ ಮೇ ಶೂರೋ ಹಸ್ತೀ ಸದಾಮದಃ !
ಮಮ ವೈರಿವಶಂ ಯಾತಃ ಕಾನ್ಭೋಗಾನುಪಲಪ್ಸ್ಯತೇ ||೧೩||

ಯೇ ಮಮಾನುಗತಾ ನಿತ್ಯಂ ಪ್ರಸಾದಧನಭೋಜನೈಃ !
ಅನುವೃತ್ತಿಂ ಧ್ರುವಂ ತೇಽದ್ಯ ಕುರ್ವನ್ತ್ಯನ್ಯಮಹೀಭೃತಾಮ್ ||೧೪||

ಅಸಮ್ಯಗ್ವ್ಯಯಶೀಲೈಸ್ತೈಃ ಕುರ್ವದ್ಭಿಃ ಸತತಂ ವ್ಯಯಮ್ !
ಸಞ್ಚಿತಃ ಸೋಽತಿದುಃಖೇನ ಕ್ಷಯಂ ಕೋಶೋ ಗಮಿಷ್ಯತಿ ||೧೫||

---

೧೧. ಆ ಮುನಿಯ ಆಶ್ರಮದ ಬಳಿಯಲ್ಲಿ ವಾಸಮಾಡುತ್ತಿದ್ದ ರಾಜನು ಆಗ ಕಳೆದುಕೊಂಡಿರುವ ರಾಜ್ಯದ ಪರಿವಾರದಲ್ಲಿ ಮಮತ್ವ-ಸಂಸ್ಕಾರದಿಂದ ಸೆಳೆಯಲ್ಪಟ್ಟ ಮಾನಸವುಳ್ಳವನಾಗಿ ದುಃಖದಿಂದ ಚಿಂತಿಸತೊಡಗಿದನು.

೧೨. ನನ್ನ ಪೂರ್ವಿಕರಾದ ರಾಜರಿಂದ ಕ್ರಮವಾಗಿ ಪಾಲಿಸಲ್ಪಟ್ಟಿರುವ ರಾಜ್ಯವು ನನ್ನಿಂದ ಕಳೆದುಕೊಳ್ಳಲ್ಪಟ್ಟಿತು. ಹಾಗೆ ಬಿಟ್ಟು ಬಂದ ನನ್ನ ಪುರವು ದುಷ್ಟವಾದ ವರ್ತನೆಯುಳ್ಳ ನನ್ನ ಭೃತ್ಯ ಪರಿವಾರದಿಂದ ಧರ್ಮದಿಂದ ಪಾಲಿಸಲ್ಪಡುತ್ತಿದೆಯೊ ; ಇಲ್ಲವೋ !

೧೩. ಪ್ರಧಾನವಾಗಿ ಪೋಷಿಸಲ್ಪಟ್ಟಿರುವುದೂ, ಬಲಾಢ್ಯವೂ ಮತ್ತು ಯಾವಾಗಲೂ ಮದಿಸಿರುವುದೂ ಆದ ನನ್ನ ಪಟ್ಟದಾನೆಯು ಇಂದು ನನ್ನ ಶತ್ರುಗಳಿಗೆ ಅಧೀನವಾಗಿ ಏನು ಸುಖ-ಉಪಚಾರಗಳನ್ನು ಹೊಂದುತ್ತಿದೆಯೊ !

೧೪. ಧನ-ಭೋಜನ ಮುಂತಾದ ಉಪಚಾರಗಳಿಂದ ನನ್ನ ಅನುಗ್ರಹವನ್ನು ಹೊಂದಿ ನನ್ನಲ್ಲಿ ಅಭಿಮಾನದಿಂದ ವರ್ತಿಸುವ ಸೇವಕರು ಇಂದು ಬೇರೊಬ್ಬ ರಾಜರ ಸೇವಾ ಅನುವೃತ್ತಿಯನ್ನು ನಿಜವಾಗಿ ಮಾಡುತ್ತಿರುವರಲ್ಲವೆ?

೧೫. ನೀತಿಯಿಲ್ಲದ ಹಾಗೆ ದುಂದುವೆಚ್ಚಮಾಡುವ ಶೀಲವುಳ್ಳ ಇಂದಿನ ಪ್ರಭುಗಳಿಂದ ಸಂತತವಾಗಿ ವ್ಯಯಮಾಡುತ್ತ ನಾನು ಬಹು ದುಃಖದಿಂದ ಕೂಡಿಹಾಕಿರುವ ಭಂಡಾರವು ಎಲ್ಲ ನಾಶವಾಗಿ ಹೋಗುವುದು !

ಏತಚ್ಚಾನ್ಯಚ್ಚ ಸತತಂ ಚಿನ್ತಯಾಮಾಸ ಪಾರ್ಥಿವಃ ।
ತತ್ರ ವಿಪ್ರಾಶ್ರಮಾಭ್ಯಾಶೇ ವೈಶ್ಯಮೇಕಂ ದದರ್ಶ ಸಃ ॥೧೬॥

ಸ ಪೃಷ್ಟಸ್ತೇನ ಕಸ್ತ್ವಂ ಭೋ ಹೇತುಶ್ಚಾಗಮನೇಽತ್ರ ಕಃ ।
ಸಶೋಕ ಇವ ಕಸ್ಮಾತ್ತ್ವಂ ದುರ್ಮನಾ ಇವ ಲಕ್ಷ್ಯಸೇ ॥೧೭॥

ಇತ್ಯಾಕರ್ಣ್ಯ ವಚಸ್ತಸ್ಯ ಭೂಪತೇಃ ಪ್ರಣಯೋದಿತಮ್ ।
ಪ್ರತ್ಯುವಾಚ ಸ ತಂ ವೈಶ್ಯಃ ಪ್ರಶ್ರಯಾವನತೋ ನೃಪಮ್ ॥೧೮॥

ವೈಶ್ಯ ಉವಾಚ :—

ಸಮಾಧಿರ್ನಾಮ ವೈಶ್ಯೋಽಹಮುತ್ಪನ್ನೋ ಧನಿನಾಂ ಕುಲೇ ।
ಪುತ್ರದಾರೈರ್ನಿರಸ್ತಶ್ಚ ಧನಲೋಭಾದಸಾಧುಭಿಃ ॥೧೯॥

---

೧೬. ಸುರಥರಾಜನು ಈ ಬಗೆಯಿಂದಲೂ ಇನ್ನೂ ಹಲವಾರು ಬಗೆಯಿಂದಲೂ ಸಂತತವಾಗಿ ಚಿಂತಿಸಿದನು. ಆ ಸಮಯದಲ್ಲಿ ರಾಜನು ಅದೇ ಮುನಿಯ ಆಶ್ರಮದ ಬಳಿಯಲ್ಲಿ ಒಬ್ಬ ವೈಶ್ಯನನ್ನು ನೋಡಿದನು.

೧೭. ಆಗ ರಾಜನಿಂದ ಆ ವೈಶ್ಯನು ಈ ರೀತಿಯಾಗಿ ಪ್ರಶ್ನಿಸಲ್ಪಟ್ಟನು. ಅಯ್ಯಾ! ನೀನು ಯಾರು? ನೀನು ಇಲ್ಲಿಗೆ ಬರಲು ಏನು ಕಾರಣವು? ನೀನು ದುಃಖವುಳ್ಳವನಂತೆಯೂ ವ್ಯಾಕುಲವಾದ ಅಂತಃಕರಣವುಳ್ಳವನಂತೆಯೂ ಕಾಣುತ್ತಿದ್ದೀಯೆ, ಇದೇಕೆ?

೧೮. ಆಗ ಆ ವೈಶ್ಯನು ಪ್ರಣಯಪೂರ್ವಕವಾಗಿ ರಾಜನು ಆಡಿರುವ ಈ ಮಾತನ್ನು ಕೇಳಿ ವಿನಯದಿಂದ ಬಗ್ಗಿದವನಾಗಿ ಆ ರಾಜನನ್ನು ಕುರಿತು ಪ್ರತ್ಯುತ್ತರವನ್ನು ಹೇಳಿದನು.

ವೈಶ್ಯನು ಹೀಗೆಂದನು :—

೧೯. ನಾನು ಸಮಾಧಿ ಎಂಬ ನಾಮಾಂಕಿತನಾದ ವೈಶ್ಯನು. ನಾನು ದೊಡ್ಡ ಶ್ರೀಮಂತರ ಮನೆಯಲ್ಲಿ ಜನಿಸಿರುವೆನು. ಧನದ ಆಶೆಯಿಂದ ದುಷ್ಟರಾಗಿ ವರ್ತಿಸುವ ನನ್ನ ಪತ್ನೀಪುತ್ರರಿಂದ ಹೊರಗೆ ತಳ್ಳಲ್ಪಟ್ಟಿರುವೆನು.

**ವಿಹೀನಃ ಸ್ವಜನೈರ್ದಾರೈಃ ಪುತ್ರೈರಾದಾಯ ಮೇ ಧನಮ್ ।**
**ವನಮಭ್ಯಾಗತೋ ದುಃಖೀ ನಿರಸ್ತಶ್ಚಾಪ್ತಬನ್ಧುಭಿಃ ॥೨೦॥**

**ಸೋಽಹಂ ನ ವೇದ್ಮಿ ಪುತ್ರಾಣಾಂ ಕುಶಲಾಕುಶಲಾತ್ಮಿಕಾಮ್ ।**
**ಪ್ರವೃತ್ತಿಂ ಸ್ವಜನಾನಾಂ ಚ ದಾರಾಣಾಂ ಚಾತ್ರ ಸಂಸ್ಥಿತಃ ॥೨೧॥**

**ಕಿಂ ನು ತೇಷಾಂ ಗೃಹೇ ಕ್ಷೇಮಮಕ್ಷೇಮಂ ಕಿಂ ನು ಸಾಮ್ಪ್ರತಮ್ ।**
**ಕಥಂ ತೇ ಕಿಂ ನು ಸದ್ವೃತ್ತಾ ದುರ್ವೃತ್ತಾಃ ಕಿಂ ನು ಮೇ ಸುತಾಃ॥೨೨॥**

**ರಾಜೋವಾಚ :—**

**ಯೈರ್ನಿರಸ್ತೋ ಭವಾಂಲ್ಲುಬ್ಧೈಃ ಪುತ್ರದಾರಾದಿಭಿರ್ಧನೈಃ ।**
**ತೇಷು ಕಿಂ ಭವತಃ ಸ್ನೇಹಮನುಬಧ್ನಾತಿ ಮಾನಸಮ್ ॥೨೩॥**

---

೨೦. ಹಾಗೆ ನಾನು ಪತ್ನೀ-ಪುತ್ರ ಮುಂತಾದ ಸ್ವಜನರಿಂದ ಹಣವನ್ನು ಕಿತ್ತುಕೊಂಡು ಹೊರದೂಡಲ್ಪಟ್ಟವನೂ ಮತ್ತು ಆಪ್ತ ಬಂಧುಗಳಿಂದಲೂ ತ್ಯಜಿಸಲ್ಪಟ್ಟವನೂ ಆಗಿ ದುಃಖಪಡುತ್ತ ವನಕ್ಕೆ ಬಂದಿರುವೆನು.

೨೧. ಹಾಗೆ ಅನಾಥನಾಗಿ ಕಾಡಿಗೆ ಸೇರಿರುವ ನಾನು ಪುತ್ರ-ಪತ್ನೀ ಮತ್ತು ಸ್ವಜನರ ವಿಷಯದಲ್ಲಿ ಶುಭ-ಅಶುಭ ರೂಪವಾದ ಯೋಗಕ್ಷೇಮ ಸಮಾಚಾರವನ್ನು ತಿಳಿಯದೇ ಇರುವೆನು.

೨೨. ನನ್ನ ಸ್ವಜನರ ಮನೆಯಲ್ಲಿ ಈಗ ಎಲ್ಲ ಕ್ಷೇಮವಾಗಿರಬಹುದೆ? ಅಥವಾ ಈಗ ಏನಾದರೂ ಕ್ಷೇಮವಿಲ್ಲದಿದೆಯೆ? ನನ್ನ ಆ ಪುತ್ರರು ಈಗಲಾದರೂ ಒಳ್ಳೆಯ ನಡತೆಯುಳ್ಳವರಾಗಿರುವರೇ? ಅಥವಾ ಈಗಲೂ ಕೆಟ್ಟ ನಡತೆಯಲ್ಲಿಯೇ ಇರುವರೆ? ನನಗೆ ಇದೊಂದೂ ತಿಳಿಯದಾಗಿದೆ.

ರಾಜನು ಇಂತೆಂದನು :—

೨೩. ಐಶ್ವರ್ಯದಲ್ಲಿ ಲೋಭಿಗಳಾದ ಯಾವ ಹೆಂಡತಿ-ಮಕ್ಕಳು ಮೊದಲಾದ ಬಂಧುಜನರಿಂದ ನೀನು ಮನೆಯಿಂದ ಹೊರಗೆ ತಳ್ಳಲ್ಪಟ್ಟಿರುವೆಯೋ ಅಂತಹವರಲ್ಲಿ ನಿನ್ನ ಮನಸ್ಸು ಹಾಗೆಯೇ ಪ್ರೇಮವನ್ನು ಮುಂದುವರಿಸುತ್ತಿದೆಯಲ್ಲ. ಇದೇಕೆ?

ವೈಶ್ಯ ಉವಾಚ :—

ಏವಮೇತದ್ಯಥಾ ಪ್ರಾಹ ಭವಾನಸ್ಮದ್ಗತಂ ವಚಃ ।
ಕಿಂ ಕರೋಮಿ ನ ಬಧ್ನಾತಿ ಮಮ ನಿಷ್ಠುರತಾಂ ಮನಃ ॥೨೪॥

ಯೈಃ ಸನ್ತ್ಯಜ್ಯ ಪಿತೃಸ್ನೇಹಂ ಧನಲುಬ್ಧೈರ್ನಿರಾಕೃತಃ ।
ಪತಿಸ್ವಜನಹಾರ್ದಂ ಚ ಹಾರ್ದಿ ತೇಷ್ವೇವ ಮೇ ಮನಃ ॥೨೫॥

ಕಿಮೇತನ್ನಾಭಿಜಾನಾಮಿ ಜಾನನ್ನಪಿ ಮಹಾಮತೇ ।
ಯತ್ಪ್ರೇಮಪ್ರವಣಂ ಚಿತ್ತಂ ವಿಗುಣೇಷ್ವಪಿ ಬನ್ಧುಷು ॥೨೬॥

ತೇಷಾಂ ಕೃತೇ ಮೇ ನಿಶ್ವಾಸೋ ದೌರ್ಮನಸ್ಯಂ ಚ ಜಾಯತೇ ।
ಕರೋಮಿ ಕಿಂ ಯನ್ನ ಮನಸ್ತೇಷ್ವಪ್ರೀತಿಷು ನಿಷ್ಠುರಮ್ ॥೨೭॥

---

ವೈಶ್ಯನು ಹೇಳಿದನು :—

೨೪. "ದ್ರೋಹವೆಣಿಸುತ್ತಿರುವ ಬಂಧುಗಳನ್ನು ನೀನು ಪ್ರೀತಿಸುತ್ತಿದ್ದೀಯೆ" ಎಂದು ನೀನು ನನ್ನ ವಿಷಯದಲ್ಲಿ ಆಡಿದ ಮಾತು ನಿಜವಾಗಿದೆ. ಆದರೆ ನಾನೇನು ಮಾಡಲಿ? ನನ್ನ ಮನಸ್ಸು ಸ್ವಜನರಲ್ಲಿ ಕಠಿನತೆಯನ್ನು ಹೊಂದಿರಲಾರದು.

೨೫. ಯಾವ ಮಕ್ಕಳಿಂದ ಧನದಲ್ಲಿ ಲೋಭಿಗಳಾಗಿ ಅದರ ಪ್ರಭಾವದಿಂದ ಪಿತೃಭಕ್ತಿಯನ್ನು ದೂರಮಾಡಿ, ಹಾಗು ಯಾವ ಹೆಂಡತಿಯಿಂದ ಪತಿ-ಸ್ವಜನ ಎಂಬೀ ಬಗೆಯಿಂದಲಾದರೂ ಇರಬೇಕಾದ ಸ್ನೇಹವನ್ನು ದೂರಮಾಡಿ ಓಡಿಸಲ್ಪಟ್ಟಿನೊ ಅದೇ ಪತ್ನೀ-ಪುತ್ರರಲ್ಲಿ ನನ್ನ ಮನಸ್ಸು ಪ್ರೇಮವುಳ್ಳದ್ದಾಗಿದೆ.

೨೬. ಎಲೈ ಪ್ರಜ್ಞಾಶಾಲಿಯಾದ ರಾಜನೇ! ಪ್ರೀತಿ-ದಯೆ ಮುಂತಾದ ಗುಣಗಳಿಲ್ಲದ ಕಠಿನಚಿತ್ತರಾದ ಬಂಧುಗಳಲ್ಲಿ ಕೂಡ ನನ್ನ ಮನಸ್ಸು ಪ್ರೇಮ-ಪೂರ್ಣವಾಗಿದೆ. ಅವರ ನಿರ್ಗುಣತೆಯನ್ನು ತಿಳಿದಿದ್ದರೂ ಇದೇಕೆ ಆಗುವುದೊ ಅದನ್ನು ನಾನು ತಿಳಿಯಲಾರೆನು.

೨೭. ಅಂತಹ ಪತ್ನಿ-ಪುತ್ರರಿಗೋಸ್ಕರ ಚಿಂತೆಯಿಂದ ನನಗೆ ನಿಟ್ಟುಸಿರು ಮತ್ತು ಮನದಲ್ಲಿ ಆತಂಕಗಳು ಉಂಟಾಗುತ್ತಿವೆ. ಪ್ರೀತಿಯಿಲ್ಲದ ಬಂಧು ಜನರಲ್ಲಿ ನನ್ನ ಮನಸ್ಸು ಏಕೋ ಕಠಿನವಾಗುವುದಿಲ್ಲ. ಇದಕ್ಕೆ ನಾನು ಏನು ಮಾಡಲಿ?

**ಮಾರ್ಕಣ್ಡೇಯ ಉವಾಚ :—**

**ತತಸ್ತೌ ಸಹಿತೌ ವಿಪ್ರ ತಂ ಮುನಿಂ ಸಮುಪಸ್ಥಿತೌ ।**
**ಸಮಾಧಿರ್ನಾಮ ವೈಶ್ಯೋಽಸೌ ಸ ಚ ಪಾರ್ಥಿವಸತ್ತಮಃ ॥೨೮॥**

**ಕೃತ್ವಾ ತು ತೌ ಯಥಾನ್ಯಾಯಂ ಯಥಾರ್ಹಂ ತೇನ ಸಂವಿದಮ್ ।**
**ಉಪವಿಷ್ಟೌ ಕಥಾಃ ಕಾಶ್ಚಿಚ್ಚಕ್ರತುರ್ವೈಶ್ಯಪಾರ್ಥಿವೌ ॥೨೯॥**

**ರಾಜೋವಾಚ :—**

**ಭಗವಂಸ್ತ್ವಾಮಹಂ ಪ್ರಷ್ಟುಮಿಚ್ಛಾಮ್ಯೇಕಂ ವದಸ್ವ ತತ್ ।**
**ದುಃಖಾಯ ಯನ್ಮೇ ಮನಸಃ ಸ್ವಚಿತ್ತಾಯತ್ತತಾಂ ವಿನಾ ॥೩೦॥**

---

ಮಾರ್ಕಂಡೇಯ ಮುನಿಯು ಹೇಳಿದನು :—

೨೮. ಕ್ರೌಷ್ಟುಕಿ ಮುನಿಯೇ! ತರುವಾಯ ಸಮಾಧಿ ಎಂಬ ನಾಮಾಂಕಿತನಾದ ವೈಶ್ಯನೂ ಮತ್ತು ಸುರಥನೆಂಬ ರಾಜೋತ್ತಮನೂ ಇಬ್ಬರೂ ಸೇರಿ ಸುಮೇಧ ಮುನಿಯ ಬಳಿಗೆ ಹೋದರು.

೨೯. ಅಲ್ಲಿ ವೈಶ್ಯ ಮತ್ತು ಪಾರ್ಥಿವರಿಬ್ಬರು ಸಂಪ್ರದಾಯ-ಆಚಾರಗಳಿಗೆ ಒಪ್ಪುವಂತೆಯೂ ತಮ್ಮ ಅರ್ಹತೆಗೆ ಅನುರೂಪವಾಗಿರುವಂತೆಯೂ ಮುನಿಯ ಬಳಿಯಲ್ಲಿ ಸಂಭಾಷಣೆ ಮುಂತಾದ ವ್ಯವಹಾರವನ್ನು ನಡೆಸಿ ಅಲ್ಲಿ ಕುಳಿತುಕೊಂಡು ಪ್ರಾಸಂಗಿಕವಾಗಿ ಕೆಲವು ಮಾತುಕಥೆಗಳನ್ನು ಆಡಿದರು.

ರಾಜನು ಇಂತೆಂದನು :—

೩೦. ಸರ್ವೈಶ್ವರ್ಯಸಂಪನ್ನನಾದ ಮುನಿಯೇ! ಯಾವುದೋಂದು ವಿಷಯವು ನನ್ನ ಮನಸ್ಸಿನಲ್ಲಿ ಸ್ಥಿರತೆಯನ್ನು ಉಂಟುಮಾಡದೆ ಮನಸ್ಸಿಗೆ ದುಃಖವನ್ನು ಕೊಡುತ್ತಿದೆಯೋ ಅಂತಹ ಒಂದು ರಹಸ್ಯ ವಿಷಯವನ್ನು ನಿನ್ನಲ್ಲಿ ಕೇಳಲು ಬಯಸುತ್ತೇನೆ. ಅದನ್ನು ದಯೆಯಿಟ್ಟು ಹೇಳಬೇಕು.

ಮಮತ್ವಂ ಗತರಾಜ್ಯಸ್ಯ ರಾಜ್ಯಾಙ್ಗೇಷ್ವಖಿಲೇಷ್ವಪಿ ।
ಜಾನತೋಽಪಿ ಯಥಾಜ್ಞಸ್ಯ ಕಿಮೇತನ್ಮುನಿಸತ್ತಮ ॥೩೧॥

ಅಯಂ ಚ ನಿಕೃತಃ ಪುತ್ರೈರ್ದಾರೈರ್ಭೃತ್ಯೈಸ್ತಥೋಜ್ಝಿತಃ ।
ಸ್ವಜನೇನ ಚ ಸನ್ತ್ಯಕ್ತಸ್ತೇಷು ಹಾರ್ದೀ ತಥಾಪ್ಯತಿ ॥೩೨॥

ಏವಮೇಷ ತಥಾಹಂ ಚ ದ್ವಾವಪ್ಯತ್ಯನ್ತದುಃಖಿತೌ ।
ದೃಷ್ಟದೋಷೇಽಪಿ ವಿಷಯೇ ಮಮತ್ವಾಕೃಷ್ಟಮಾನಸೌ ॥೩೩॥

ತತ್ಕಿಮೇತನ್ಮಹಾಭಾಗ ಯನ್ಮೋಹೋ ಜ್ಞಾನಿನೋರಪಿ ।
ಮಮಾಸ್ಯ ಚ ಭವತ್ಯೇಷಾ ವಿವೇಕಾನ್ಧಸ್ಯ ಮೂಢತಾ ॥೩೪॥

---

೩೧. ಮುನಿಶ್ರೇಷ್ಠನಾದ ಸುಮೇಧಋಷಿಯೇ! ಪ್ರಪಂಚದ ಸ್ಥಿತಿ-ಗತಿಗಳನ್ನು ಅರಿತವನಾಗಿದ್ದರೂ ರಾಜ್ಯಭ್ರಷ್ಟನಾದ ನನಗೆ ಅಜ್ಞಾನಿಯಾದ ಮನುಷ್ಯನಂತೆ ಅಖಿಲ ರಾಜ್ಯಾಂಗಗಳಲ್ಲಿ ಮೊದಲಿನಂತೆ ಮಮತ್ವಭಾವನೆಯು ಅಂಟಿಕೊಂಡಿರುವುದು. ಇದು ಏಕೆ?

೩೨. ಈ ವೈಶ್ಯನು ಮಕ್ಕಳಿಂದ ಅವಮಾನಗೊಳಿಸಲ್ಪಟ್ಟಿರುವನು. ಪತ್ನೀ–ಸೇವಕರಿಂದ ನಿರಾಕರಿಸಲ್ಪಟ್ಟಿರುವನು. ಹಾಗು ಸ್ವಜನರಿಂದ ಕೂಡ ತ್ಯಜಿಸಲ್ಪಟ್ಟಿದ್ದಾನೆ. ಆದರೂ ಆ ಪತ್ನೀ-ಪುತ್ರ-ಭೃತ್ಯ-ಸ್ವಜನರಲ್ಲಿ ವಿಶೇಷವಾಗಿ ಪ್ರೀತಿಯುಳ್ಳವನಾಗಿದ್ದಾನೆ.

೩೩. ಹೀಗೆ ಈ ವೈಶ್ಯನು ಮತ್ತು ಇವನಂತೆಯೇ ನಾನು ಇಬ್ಬರೂ ಕೂಡ ಅತಿಯಾಗಿ ದುಃಖಕ್ಕೆ ಸಿಲುಕಿದ್ದೇವೆ. ದೋಷವನ್ನು ಕಂಡಿರುವ ಪತ್ನಿ–ಪುತ್ರ ಮುಂತಾದ ಪರಿವಾರದಲ್ಲಿ ಮಮತ್ವದಿಂದ ಸೆಳೆಯಲ್ಪಟ್ಟ ಮನಸ್ಸುಳ್ಳವ–ರಾಗಿದ್ದೇವೆ.

೩೪. ಮಹತ್ತಾದ ಭಾಗ್ಯದನಿಧಿಯೇ! ಜ್ಞಾನವಂತರಿಗೆ ಕೂಡ ಹೀಗೆ ಮೋಹದ ಆವರಣವುಂಟಾಗಿರುವುದು. ಇದೇಕೆ? ಮಮತೆಯನ್ನು ಇಡಬಹುದೆ? ಇಡಬಾರದೆ? ಎಂಬ ವಿವೇಕವನ್ನು ಕಳೆದುಕೊಂಡ ನಮ್ಮಿಬ್ಬರಿಗೂ ಈರೀತಿ ಮೂಢತನವು ಪ್ರಾಪ್ತವಾಗಿದೆ.

**ಋಷಿರುವಾಚ :—**

**ಜ್ಞಾನಮಸ್ತಿ ಸಮಸ್ತಸ್ಯ ಜನ್ತೋರ್ವಿಷಯಗೋಚರೇ ।**
**ವಿಷಯಾಶ್ಚ ಮಹಾಭಾಗ ಯಾನ್ತಿ ಚೈವಂ ಪೃಥಕ್ ಪೃಥಕ್ ॥೩೫॥**

**ದಿವಾನ್ಧಾಃ ಪ್ರಾಣಿನಃ ಕೇಚಿದ್ರಾತ್ರಾವನ್ಧಾಸ್ತಥಾಪರೇ ।**
**ಕೇಚಿದ್ದಿವಾ ತಥಾ ರಾತ್ರೌ ಪ್ರಾಣಿನಸ್ತುಲ್ಯದೃಷ್ಟಯಃ ॥೩೬॥**

**ಜ್ಞಾನಿನೋ ಮನುಜಾಃ ಸತ್ಯಂ ಕಿನ್ತು ತೇ ನ ಹಿ ಕೇವಲಮ್ ।**
**ಯತೋ ಹಿ ಜ್ಞಾನಿನಃ ಸರ್ವೇ ಪಶುಪಕ್ಷಿಮೃಗಾದಯಃ ॥೩೭॥**

**ಜ್ಞಾನಂ ನ ತನ್ಮನುಷ್ಯಾಣಾಂ ಯತ್ತೇಷಾಂ ಮೃಗಪಕ್ಷಿಣಾಮ್ ।**
**ಮನುಷ್ಯಾಣಾಂ ಚ ಯತ್ತೇಷಾಂ ತುಲ್ಯಮನ್ಯತ್ತಥೋಭಯೋಃ॥೩೮॥**

---

ಸುಮೇಧಮುನಿಯು ಹೇಳಿದನು :—

೩೫. ಭಾಗ್ಯಸಂಪನ್ನನಾನ ರಾಜನೇ ! ಎಲ್ಲ ಜಂತುಗಳಿಗೂ ತಮಗೆ ಭೋಗ್ಯವಾದ ವಿಷಯಗಳಲ್ಲಿ ಜ್ಞಾನವಿದ್ದೇ ಇದೆ. ಅಂತಹ ಭೋಗ್ಯವಿಷಯಗಳು ಜಂತುವಿನ ಜನ್ಮಾಂತರಸಂಸ್ಕಾರದಿಂದ ನಾನಾಬಗೆಯಾಗಿ ಗೋಚರವಾಗುತ್ತವೆ.

೩೬. ಹಾಗೆ ವಿಷಯಜ್ಞಾನವನ್ನು ಲಕ್ಷ್ಯದಲ್ಲಿಟ್ಟುಕೊಂಡರೆ ಕೆಲವು ಪ್ರಾಣಿಗಳು ಹಗಲಿನಲ್ಲಿ ವಿಷಯಗಳನ್ನು ತಿಳಿಯಲಾರದೆ ಕುರುಡಾಗಿರುತ್ತವೆ. ಮತ್ತೆ ಕೆಲವು ರಾತ್ರಿಯಲ್ಲಿ ಕುರುಡಾಗಿರುತ್ತವೆ. ಕೆಲವು ಪ್ರಾಣಿಗಳು ಮಾತ್ರ ಹಗಲು-ರಾತ್ರಿಗಳಲ್ಲಿ ಸಮಾನವಾದ ಜ್ಞಾನವುಳ್ಳವುಗಳಾಗಿರುತ್ತವೆ.

೩೭. ಮಾನವರು ಜ್ಞಾನಸಂಪನ್ನರೆಂಬುದು ನಿಜ. ಆದರೆ ಮಾನವರು ಮಾತ್ರ ಜ್ಞಾನವಂತರೆನ್ನಲಾಗುವುದಿಲ್ಲ. ಪಶು–ಪಕ್ಷಿ–ಮೃಗ ಮುಂತಾದ ಎಲ್ಲ ಜಂತುಗಳು ಜ್ಞಾನಸಂಪನ್ನವಾಗಿವೆ.

೩೮. ಆ ಪಶು-ಪಕ್ಷಿಗಳಿಗೆ ತಮ್ಮ ಜಾತಿಗೆ ತಕ್ಕಂತೆ ದೊರೆಯುವ ಭೋಗ್ಯವಿಷಯಗಳಲ್ಲಿ ಯಾವ ಜ್ಞಾನವಿದೆಯೋ ಹಾಗೆಯೆ ಮಾನವರಿಗೆ ಭೋಗ್ಯವಿಷಯಗಳಲ್ಲಿ ಯಾವ ಜ್ಞಾನವಿದೆಯೋ ಅದು ಪ್ರಾಣಿ-ಮನುಷ್ಯರಿಗೆ ತುಲ್ಯವಾಗಿದೆ. ಮಾನವರಲ್ಲಿ ಮಾತ್ರ ಇರುವ ಶಾಸ್ತ್ರ ಅಭ್ಯಾಸದಿಂದ ಉಂಟಾಗುವ ವಿವೇಕಜ್ಞಾನವು ಪಶುಪಕ್ಷಿಗಳಲ್ಲಿ ಇರುವುದಿಲ್ಲ.

ಜ್ಞಾನೇಽಪಿ ಸತಿ ಪಶ್ಯೈತಾನ್ಪತಗಾಞ್ಛಾವಚಞ್ಚುಷು |
ಕಣಮೋಕ್ಷಾದೃತಾನ್ಮೋಹಾತ್ಪೀಡ್ಯಮಾನಾನಪಿ ಕ್ಷುಧಾ ||೩೯||

ಮಾನುಷಾ ಮನುಜವ್ಯಾಘ್ರ ಸಾಭಿಲಾಷಾಃ ಸುತಾನ್ಪ್ರತಿ |
ಲೋಭಾತ್ಪ್ರತ್ಯುಪಕಾರಾಯ ನನ್ವೇತಾನ್ಕಿಂ ನ ಪಶ್ಯಸಿ ||೪೦||

ತಥಾಽಪಿ ಮಮತಾವರ್ತೇ ಮೋಹಗರ್ತೇ ನಿಪಾತಿತಾಃ |
ಮಹಾಮಾಯಾಪ್ರಭಾವೇಣ ಸಂಸಾರಸ್ಥಿತಿಕಾರಿಣಾ ||೪೧||

ತನ್ನಾತ್ರ ವಿಸ್ಮಯಃ ಕಾರ್ಯೋ ಯೋಗನಿದ್ರಾ ಜಗತ್ಪತೇಃ |
ಮಹಾಮಾಯಾ ಹರೇಶ್ಚೈಷಾ ತಯಾ ಸಂಮೋಹ್ಯತೇ ಜಗತ್ ||೪೨||

---

೩೯. ಈ ಪಕ್ಷಿಗಳು ತಾವು ತಂದಿರುವ ಧಾನ್ಯಕಣಗಳನ್ನು ತಿಂದು ಹಸಿವನ್ನು ಅಡಗಿಸಿಕೊಳ್ಳಬಹುದೆಂದು ತಿಳಿದಿದ್ದರೂ ತಾವು ಹಸಿವಿನ ಪೀಡೆಯನ್ನು ಅನುಭವಿಸುತ್ತ ಮಮತೆಯಿಂದ ಮರಿಗಳ ಕೊಕ್ಕಿನಲ್ಲಿ ಕಣಗಳನ್ನು ಹಾಕಲು ಆದರದಿಂದ ಕೂಡಿವೆ. ಅದನ್ನು ನೋಡು.

೪೦. ಎಲೈ ಮಾನವೋತ್ತಮನೇ! ಪ್ರತ್ಯುಪಕಾರವನ್ನು ಮಾಡುವರೆಂಬ ಲೋಭದಿಂದ ಮಕ್ಕಳಲ್ಲಿ ಮಾನವರು ಅಭಿಲಾಷೆಯುಳ್ಳವರಾಗುತ್ತಾರೆ. ಮರಿಗಳಲ್ಲಿ ಪ್ರೀತಿಯಿಡುತ್ತಿರುವ ಈ ಪಕ್ಷಿಗಳನ್ನು ನೀನು ನೋಡುತ್ತ ಇಲ್ಲವೆ?

೪೧. ಮಾನವರು ಪಶು-ಪಕ್ಷಿಗಳಿಗಿಂತಲೂ ವಿಶೇಷವಾದ ಶಾಸ್ತ್ರೀಯ ವಿವೇಕದಿಂದ ಕೂಡಿದವರಾದರೂ ಸಂಸಾರ ಪ್ರವಾಹವನ್ನು ನಡೆಯಿಸುತ್ತಿರುವ ಮಹಾಮಾಯೆಯ ಪ್ರಭಾವದಿಂದ ಮಮತೆಯೆಂಬ ಸುಳಿಯಿಂದ ಕೂಡಿದ ಮೋಹವೆಂಬ ಹಳ್ಳದಲ್ಲಿ ಹಾಕಲ್ಪಟ್ಟಿರುವರು.

೪೨. ಆದುದರಿಂದ ಈ ವಿಷಯದಲ್ಲಿ ವಿಸ್ಮಯಪಡಬೇಕಾದುದಿಲ್ಲ. ಜಗತ್ತನ್ನು ಪಾಲಿಸುವ ವಿಷ್ಣುಪರಮಾತ್ಮನ ಯೋಗನಿದ್ರೆಯಿದು. ಮತ್ತು ಶ್ರೀಮನ್ನಾರಾಯಣನ ಮಹಾಮಾಯೆಯಿದು. ಆದುದರಿಂದ ಎಲ್ಲ ಜಗತ್ತು ಮೋಹಗೊಳಿಸಲ್ಪಟ್ಟದೆ.

ಜ್ಞಾನಿನಾಮಪಿ ಚೇತಾಂಸಿ ದೇವೀ ಭಗವತೀ ಹಿ ಸಾ ।
ಬಲಾದಾಕೃಷ್ಯ ಮೋಹಾಯ ಮಹಾಮಾಯಾ ಪ್ರಯಚ್ಛತಿ ॥೪೩॥

ತಯಾ ವಿಸೃಜ್ಯತೇ ವಿಶ್ವಂ ಜಗದೇತಚ್ಚರಾಚರಮ್ ।
ಸೈಷಾ ಪ್ರಸನ್ನಾ ವರದಾ ನೃಣಾಂ ಭವತಿ ಮುಕ್ತಯೇ ॥೪೪॥

ಸಾ ವಿದ್ಯಾ ಪರಮಾ ಮುಕ್ತೇರ್ಹೇತುಭೂತಾ ಸನಾತನೀ ।
ಸಂಸಾರಬನ್ಧಹೇತುಶ್ಚ ಸೈವ ಸರ್ವೇಶ್ವರೇಶ್ವರೀ ॥೪೫॥

ರಾಜೋವಾಚ :—

ಭಗವನ್ ಕಾ ಹಿ ಸಾ ದೇವೀ ಮಹಾಮಾಯೇತಿ ಯಾಂ ಭವಾನ್ ।
ಬ್ರವೀತಿ ಕಥಮುತ್ಪನ್ನಾ ಕರ್ಮ ಚಾಸ್ಯಾಶ್ಚ ಕಿಂ ದ್ವಿಜ ॥೪೬॥

---

೪೩. ಸರ್ವೈಶ್ವರ್ಯದಿಂದ ಕೂಡಿದ, ಅನಾದಿಯಾದ ಮತ್ತು ಪ್ರಭಾವದಿಂದ ಕೂಡಿದ ಮಹಾಮಾಯೆಯು ಜ್ಞಾನವಂತರ ಮನಸ್ಸನ್ನು ಕೂಡ ಬಲಾತ್ಕಾರದಿಂದ ಸೆಳೆದು ವಿವೇಕ ಭ್ರಷ್ಟವನ್ನಾಗಿ ಮಾಡಿ ಮೋಹಾವಸ್ಥೆಗೆ ತಂದುಬಿಡುವುದು.

೪೪. ಚರ-ಅಚರ ಪ್ರಾಣಿವರ್ಗದಿಂದ ಕೂಡಿದ ಈ ಪ್ರಪಂಚವು ಮಹಾಮಾಯೆಯಿಂದ ಸೃಷ್ಟಿಮಾಡಲ್ಪಡುವುದು. ಜಗತ್ತಿಗೆ ಕಾರಣಳಾದ ಮಹಾಮಾಯೆಯು ವರವನ್ನು ನೀಡಲು ಅನುಗ್ರಹಮಾಡಿದರೆ ಮಾನವರಿಗೆ ಮುಕ್ತಿಯನ್ನು ಕೊಡುವಳು.

೪೫. ಆ ಮಹಾಮಾಯೆಯು ಪರಮಾರ್ಥವಲ್ಲದ ತನ್ನ ಪ್ರವರ್ತಕತ್ವರೂಪದಿಂದ ಮುಕ್ತಿಪಥವನ್ನು ಬಿಟ್ಟು ಧರ್ಮ-ಅರ್ಥ ಕಾಮವೆಂಬ ತ್ರಿವರ್ಗಕ್ಕೆ ಕಾರಣವಾಗುವಳು. ಹಾಗು ಅನಾದಿಯಾದ ಮಹಾಮಾಯೆಯು ಸಂಸಾರ ಬಂಧಕ್ಕೆ ಕಾರಣಳೂ ಮತ್ತು ಸರ್ವೇಶ್ವರರಿಗೆ ಈಶ್ವರಿಯೂ ಆಗಿರುವಳು.

ರಾಜನು ಇಂತೆಂದನು :—

೪೬. ಸರ್ವೈಶ್ವರ್ಯಸಂಪನ್ನನಾದ ಸುಮೇಧಮುನಿಯೇ ! ನೀನು ಮಹಾಮಾಯೆಯೆಂಬ ಹೆಸರಿನಿಂದ ಯಾವ ಪರಮಶಕ್ತಿಯನ್ನು ಕರೆಯುವೆಯೋ ಆ ಪರಾಶಕ್ತಿದೇವಿಯು ಯಾರು ? ಅವಳು ಎಲ್ಲಿ ಹುಟ್ಟಿದಳು ? ಅವಳ ವ್ಯಾಪಾರವೇನು ?

ಯತ್ಪ್ರಭಾವಾ ಚ ಸಾ ದೇವೀ ಯತ್ಸ್ವರೂಪಾ ಯದುದ್ಭವಾ ।
ತತ್ಸರ್ವಂ ಶ್ರೋತುಮಿಚ್ಛಾಮಿ ತ್ವತ್ತೋ ಬ್ರಹ್ಮವಿದಾಂ ವರ ॥೪೭॥

ಋಷಿರುವಾಚ :—

ನಿತ್ಯೈವ ಸಾ ಜಗನ್ಮೂರ್ತಿಸ್ತಯಾ ಸರ್ವಮಿದಂ ತತಮ್ ।
ತಥಾಪಿ ತತ್ಸಮುತ್ಪತ್ತಿರ್ಬಹುಧಾ ಶ್ರೂಯತಾಂ ಮಮ ॥೪೮॥

ದೇವಾನಾಂ ಕಾರ್ಯಸಿದ್ಧ್ಯರ್ಥಮಾವಿರ್ಭವತಿ ಸಾ ಯದಾ ।
ಉತ್ಪನ್ನೇತಿ ತದಾ ಲೋಕೇ ಸಾ ನಿತ್ಯಾಪ್ಯಭಿಧೀಯತೇ ॥೪೯॥

ಯೋಗನಿದ್ರಾಂ ಯದಾ ವಿಷ್ಣುರ್ಜಗತ್ಯೇಕಾರ್ಣವೀಕೃತೇ ।
ಆಸ್ತೀರ್ಯ ಶೇಷಮಭಜತ್ಕಲ್ಪಾನ್ತೇ ಭಗವಾನ್ಪ್ರಭುಃ ॥೫೦॥

---

೪೭. ಬ್ರಹ್ಮವೇತ್ತರಲ್ಲಿ ಗಣ್ಯನಾದ ಮುನಿಯೇ ! ಆ ಮಹಾಮಾಯಾದೇವಿಯು ಯಾವ ಪ್ರಭಾವದಿಂದ ಕೂಡಿರುವಳು ? ಯಾವ ಸ್ವರೂಪವುಳ್ಳವಳು ? ಮತ್ತು ಯಾವುದರಿಂದ ಜನಿಸಿದವಳು ? ಇದೆಲ್ಲವನ್ನೂ ನಿನ್ನಿಂದ ನಾನು ಶ್ರವಣಮಾಡಲು ಕುತೂಹಲಿಯಾಗಿರುವೆನು.

ಸುಮೇಧಋಷಿಯು ನುಡಿದನು :—

೪೮. ವಿಶ್ವರೂಪಿಣಿಯಾದ ಮಹಾಮಾಯೆಯು ನಿತ್ಯಳಾಗಿರುವಳು. ಅವಳಿಂದ ಈ ಸಮಸ್ತ ವಿಶ್ವವು ಆವರಿಸಲ್ಪಟ್ಟಿರುವುದು. ಹಾಗೆ ನಿತ್ಯಳಾಗಿದ್ದ ಆದಿಶಕ್ತಿಯ ಬಗೆಬಗೆಯ ಉತ್ಪತ್ತಿಯನ್ನು ನನ್ನಿಂದ ಕೇಳು.

೪೯. ಆದಿಶಕ್ತಿಯು ದೇವತೆಗಳ ಸಹಾಯಕಾರ್ಯವನ್ನು ಸಾಧಿಸುವುದಕ್ಕೋಸ್ಕರ ಯಾವ ಯಾವ ಸಮಯಗಳಲ್ಲಿ ಆವಿರ್ಭಾವವನ್ನು ಹೊಂದುವಳೊ, ಆಗ ನಿತ್ಯಳಾಗಿದ್ದ ಪರಾಶಕ್ತಿಯನ್ನು ಉತ್ಪನ್ನಳೆಂದು ಲೋಕದಲ್ಲಿ ಹೇಳಿಕೊಳ್ಳುವರು.

೫೦. ಅಖಂಡೈಶ್ವರ್ಯಸಂಪನ್ನನೂ, ವಿಶ್ವನಿಯಾಮಕನೂ ಆದ ಶ್ರೀಮನ್ನಾರಾಯಣನು ಕಲ್ಪದ ಅವಸಾನದಲ್ಲಿ ಪ್ರಪಂಚವೆಲ್ಲ ಎಲ್ಲೆಲ್ಲೂ ಜಲರಾಶಿಮಯವಾಗಿರಲು ಆದಿಶೇಷವೆಂಬ ತನ್ನ ಶಯನವನ್ನು ಹಾಸಿಕೊಂಡು ಯೋಗನಿದ್ರೆಯನ್ನು ಹೊಂದಿದನು.

ತದಾ ದ್ವಾವಸುರೌ ಘೋರೌ ವಿಖ್ಯಾತೌ ಮಧುಕೈಟಭೌ ।
ವಿಷ್ಣುಕರ್ಣಮಲೋದ್ಭೂತೌ ಹನ್ತುಂ ಬ್ರಹ್ಮಾಣಮುದ್ಯತೌ ॥೫೧॥

ಸ ನಾಭಿಕಮಲೇ ವಿಷ್ಣೋಃ ಸ್ಥಿತೋ ಬ್ರಹ್ಮಾ ಪ್ರಜಾಪತಿಃ ।
ದೃಷ್ಟ್ವಾ ತಾವಸುರೌ ಚೋಗ್ರೌ ಪ್ರಸುಪ್ತಂ ಚ ಜನಾರ್ದನಮ್॥೫೨॥

ತುಷ್ಟಾವ ಯೋಗನಿದ್ರಾಂ ತಾಮೇಕಾಗ್ರಹೃದಯಃ ಸ್ಥಿತಃ ।
ಪ್ರಬೋಧನಾರ್ಥಾಯ ಹರೇರ್ಹರಿನೇತ್ರಕೃತಾಲಯಾಮ್ ॥೫೩॥

ಬ್ರಹ್ಮೋವಾಚ :—

ವಿಶ್ವೇಶ್ವರೀಂ ಜಗದ್ಧಾತ್ರೀಂ ಸ್ಥಿತಿಸಂಹಾರಕಾರಿಣೀಮ್ ।
ಸ್ತೌಮಿ ನಿದ್ರಾಂ ಭಗವತೀಂ ವಿಷ್ಣೋರತುಲತೇಜಸಃ ॥೫೪॥

---

೫೧. ಆ ಸಮಯದಲ್ಲಿ ಮಧು-ಕೈಟಭ ಎಂದು ನಾಮಾಂಕನದಿಂದ ಖ್ಯಾತಿಹೊಂದಿರುವ ಘೋರಾಕಾರದ ಇಬ್ಬರು ಅಸುರರು ವಿಷ್ಣುವಿನ ಕಿವಿಗಳ ಮಲದಿಂದ ಜನಿಸಿದರು. ಅವರು ಬ್ರಹ್ಮದೇವನನ್ನು ವಧಿಸಲು ಯತ್ನಿಸಿದರು.

೫೨. ಆಗ ವಿಷ್ಣುಪರಮಾತ್ಮನ ನಾಭಿಕಮಲದಲ್ಲಿರುವ ಪ್ರಜಾಪಾಲಕ-ನಾದ ಬ್ರಹ್ಮದೇವನು ಉಗ್ರರೂಪದ ಇಬ್ಬರು ಅಸುರರು ತನ್ನನ್ನು ಸಂಹರಿಸಲು ಬರುತ್ತಿರುವುದನ್ನೂ, ವಿಷ್ಣುಪರಮಾತ್ಮನು ಯೋಗನಿದ್ರೆಯಿಂದ ಆಕ್ರಾಂತ-ನಾದುದನ್ನೂ ಕಂಡನು.

೫೩. ಆಗ ವಿಷ್ಣುಪರಮಾತ್ಮನನ್ನು ಎಚ್ಚರಗೊಳಿಸುವುದಕ್ಕೋಸ್ಕರ ವಿಷ್ಣುವಿನ ಕಣ್ಣುಗಳಲ್ಲಿ ಬಂದು ವಾಸಹೊಂದಿರುವ ಯೋಗನಿದ್ರೆಯನ್ನು ಏಕಾಗ್ರತೆಯನ್ನು ಹೊಂದಿದ ಚಿತ್ತವುಳ್ಳವನಾಗಿ ಸ್ತೋತ್ರಮಾಡಿದನು.

ಬ್ರಹ್ಮದೇವನು ಹೀಗೆ ಸ್ತುತಿಮಾಡಿದನು :—

೫೪. ವಿಶ್ವಕ್ಕೆ ಈಶ್ವರಿಯೂ, ವಿಶ್ವದ ಉತ್ಪತ್ತಿ-ಸ್ಥಿತಿ-ಲಯಗಳಿಗೆ ಕಾರಣಳೂ, ವಿಶ್ವಾಧಾರಳೂ, ನಿರುಪಮವಾದ ತೇಜಸ್ಸಿನಿಂದ ಕೂಡಿದ ವಿಷ್ಣುಪರಮಾತ್ಮನ ಅಂಶರೂಪಳೂ ಆದ ಭಗವತಿಯಾದ ಯೋಗನಿದ್ರೆಯನ್ನು ಸ್ತುತಿಸುವೆನು.

ತ್ವಂ ಸ್ವಾಹಾ ತ್ವಂ ಸ್ವಧಾ ತ್ವಂ ಹಿ ವಷಟ್ಕಾರಃ ಸ್ವರಾತ್ಮಿಕಾ ।
ಸುಧಾ ತ್ವಮಕ್ಷರೇ ನಿತ್ಯೇ ತ್ರಿಧಾಮಾತ್ರಾತ್ಮಿಕಾ ಸ್ಥಿತಾ ॥೫೫॥

ಅರ್ಧಮಾತ್ರಾ ಸ್ಥಿತಾ ನಿತ್ಯಾ ಯಾನುಚ್ಚಾರ್ಯಾ ವಿಶೇಷತಃ ।
ತ್ವಮೇವ ಸನ್ಧ್ಯಾ ಸಾವಿತ್ರೀ ತ್ವಂ ದೇವಿ ಜನನೀ ಪರಾ ॥೫೬॥

ತ್ವಯೈತದ್ಧಾರ್ಯತೇ ವಿಶ್ವಂ ತ್ವಯೈತತ್ಸೃಜ್ಯತೇ ಜಗತ್ ।
ತ್ವಯೈತತ್ಪಾಲ್ಯತೇ ದೇವಿ ತ್ವಮತ್ಸ್ಯನ್ತೇ ಚ ಸರ್ವದಾ ॥೫೭॥

ವಿಸೃಷ್ಟೌ ಸೃಷ್ಟಿರೂಪಾ ತ್ವಂ ಸ್ಥಿತಿರೂಪಾ ಚ ಪಾಲನೇ ।
ತಥಾ ಸಂಹೃತಿರೂಪಾನ್ತೇ ಜಗತೋಽಸ್ಯ ಜಗನ್ಮಯೇ ॥೫೮॥

---

೫೫. ಶಾಶ್ವತಸ್ವರೂಪಳೇ! ಸ್ಥಿರರೂಪಳೇ! ನೀನು ದೇವತೆಗಳಿಗೆ ಹವಿಸ್ಸನ್ನು ಒಪ್ಪಿಸುವ ಸ್ವಾಹಾಮಂತ್ರಸ್ವರೂಪಳು. ನೀನು ಪಿತೃಗಳಿಗೆ ಕವ್ಯವನ್ನು ಒಪ್ಪಿಸುವ ಸ್ವಧಾಸ್ವರೂಪಳು. ನೀನು ವಷಟ್‌ಮಂತ್ರಸ್ವರೂಪಳು. ನೀನು ಸ್ವರ್ಗಲೋಕಸ್ವರೂಪಳು. ನೀನು ಅಮೃತವನ್ನು ಪಾನಮಾಡುವ ದೇವಿಯು. ಮತ್ತು ಉದಾತ್ತ-ಅನುದಾತ್ತ-ಸ್ವರಿತವೆಂಬ ಮೂರು ಬಗೆಯಿಂದ ಮಾತ್ರಾಸ್ವರೂಪದ ವರ್ಣಮಾಲೆಯಾಗಿದ್ದೀಯೆ.

೫೬. ಮತ್ತು ನೀನು ವ್ಯಂಜನವರ್ಣದ ರೂಪದಿಂದ ಅರ್ಧಮಾತ್ರಾ-ಸ್ವರೂಪಿಣಿಯು. ನೀನು ನಿತ್ಯಳು. ನೀನು ವಾಙ್ಮನಸಗಳಿಗೆ ವೇದ್ಯಳಲ್ಲವ್ದರಿಂದ ಉಚ್ಚಾರಣಮಾಡಲು ಶಕ್ಯವಲ್ಲದವಳು. ನೀನು ಸಂಧ್ಯಾದೇವಿಯು. ನೀನು ಸಾವಿತ್ರೀಮಂತ್ರರೂಪಳು. ಮತ್ತು ದೇವಿಯೇ! ನೀನು ಸರ್ವೋತ್ತಮಳಾದ ವೇದಮಾತೆಯಾಗಿದ್ದೀಯೆ.

೫೭. ಮಹಾಮಾಯಾದೇವಿಯೇ! ಈ ವಿಶ್ವವು ನಿನ್ನಿಂದ ಧರಿಸಲ್ಪ-ಟ್ಟಿರುವುದು. ಈ ಜಗತ್ತು ನಿನ್ನಿಂದ ಸೃಜಿಸಲ್ಪಡುವುದು. ಈ ಪ್ರಪಂಚವು ನಿನ್ನಿಂದ ಪಾಲಿಸಲ್ಪಡುವುದು. ಮತ್ತು ನೀನು ಯಾವಾಗಲೂ ಪ್ರಲಯದಲ್ಲಿ ಇವನ್ನು ಸಂಹರಿಸುತ್ತೀಯೆ.

೫೮. ವಿಶ್ವರೂಪಿಣಿಯಾದ ಮಹಾದೇವಿಯೇ! ಈ ಜಗತ್ತಿನ ಸೃಷ್ಟಿ-ಸಮಯದಲ್ಲಿ ಸೃಷ್ಟಿಶಕ್ತಿಸ್ವರೂಪಿಣಿಯೂ, ಪಾಲನ ಸಮಯದಲ್ಲಿ ಪಾಲನಶಕ್ತಿ-ಸ್ವರೂಪಿಣಿಯೂ ಮತ್ತು ಹಾಗೆಯೇ ಸಂಹಾರ ಸಮಯದಲ್ಲಿ ಸಂಹಾರಶಕ್ತಿ-ಸ್ವರೂಪಳೂ ಆಗಿರುತ್ತೀಯೆ.

**ಮಹಾವಿದ್ಯಾ ಮಹಾಮಾಯಾ ಮಹಾಮೇಧಾ ಮಹಾಸ್ಮೃತಿಃ ।**
**ಮಹಾಮೋಹಾ ಭಗವತೀ ಮಹಾದೇವೀ ಮಹೇಶ್ವರೀ ॥೫೯॥**

**ಪ್ರಕೃತಿಸ್ತ್ವಂ ಚ ಸರ್ವಸ್ಯ ಗುಣತ್ರಯವಿಭಾವಿನೀ ।**
**ಕಾಲರಾತ್ರಿರ್ಮಹಾರಾತ್ರಿರ್ಮೋಹರಾತ್ರಿಶ್ಚ ದಾರುಣಾ ॥೬೦॥**

**ತ್ವಂ ಶ್ರೀಸ್ತ್ವಮೀಶ್ವರೀ ತ್ವಂ ಹ್ರೀಸ್ತ್ವಂ ಬುದ್ಧಿರ್ಬೋಧಲಕ್ಷಣಾ ।**
**ಲಜ್ಜಾ ಪುಷ್ಟಿಸ್ತಥಾ ತುಷ್ಟಿಸ್ತ್ವಂ ಶಾನ್ತಿಃ ಕ್ಷಾನ್ತಿರೇವ ಚ ॥೬೧॥**

---

೫೯. ಯೋಗನಿದ್ರಾದೇವಿಯೇ ! ನೀನು ಮುಕ್ತಿಯನ್ನು ಕೊಡುವ ಮಹಾವಿದ್ಯೆಯು. ನೀನು ವಿವೇಕವನ್ನು ಆವರಿಸುವ ಮಹಾಮಾಯೆಯು. ನೀನು ಮನಸ್ಸಿನಲ್ಲುಂಟಾಗುವ ಧಾರಣಾಶಕ್ತಿಯು. ನೀನು ಪ್ರಾಣಿಗಳ ಸ್ಮರಣ-ಶಕ್ತಿಯು. ನೀನು ಭ್ರಾಂತಿಯನ್ನು ಕೊಡುವ ಮೋಹಸ್ವರೂಪಳು. ನೀನು ಅಖಂಡೈಶ್ವರ್ಯಸಂಪನ್ನಳು. ನೀನು ಮಹಾದೇವನ ಪತ್ನಿಯು. ಮತ್ತು ನೀನು ಸರ್ವೇಶ್ವರಿಯು ಆಗಿದ್ದೀಯೆ.

೬೦. ನೀನು ಹುಟ್ಟುವ ಸಮಸ್ತ ವಸ್ತುಗಳಿಗೆ ಮೂಲಕಾರಣಳು. ನೀನು ಸತ್ತ್ವ-ರಜಸ್ಸು-ತಮಸ್ಸು ಈ ಗುಣಗಳಿಗೆ ಸುಖ-ದುಃಖ-ಮೋಹ ಸ್ವಭಾವಗಳನ್ನು ಕೊಟ್ಟವಳು. ನೀನು ಜಗತ್ತಿನ ಸಂಹಾರಕಳಾದ ಕಾಲರಾತ್ರಿಯು. ನೀನು ಬ್ರಹ್ಮನನ್ನು ವಿಶ್ರಾಂತಿಗೊಳಿಸುವ ಮಹಾರಾತ್ರಿಯು ಮತ್ತು ಭಯಂಕರ-ವಾದ ಮಮತಾಮಯವಾದ ಮೋಹರಾತ್ರಿಯೂ ಆಗಿದ್ದೀಯೆ.

೬೧. ನೀನು ಸಂಪತ್ತಿಯ ಸ್ವರೂಪಳು. ನೀನು ಮಹೇಶ್ವರನ ಪತ್ನಿಯು. ನೀನು ಹ್ರೀಂಕಾರದ ಅವಯವವಾದ ಪ್ರಾಣವಾಚಕವಾದ ಹ್ರೀಕಾರಸ್ವರೂಪಳು. ನೀನು ಚೈತನ್ಯಸ್ವರೂಪಳು. ನೀನು ಪ್ರಮಾಣಗಳಿಂದುಂಟಾಗುವ ಬುದ್ಧಿ-ವೃತ್ತಿಯು. ನೀನು ನಾಚಿಕೆಯ ಸ್ವರೂಪಳು. ನೀನು ಪುಷ್ಟಿಯು, ನೀನು ಪ್ರೀತಿಯು, ನೀನು ವಿಷಯವ್ಯಾಸಂಗದ ವಿಶ್ರಾಂತಿಯು ಮತ್ತು ನೀನೇ ಸಹನೆಯ ಸ್ವರೂಪಳೂ ಆಗಿದ್ದೀಯೆ.

ಖಡ್ಗಿನೀ ಶೂಲಿನೀ ಘೋರಾ ಗದಿನೀ ಚಕ್ರಿಣೀ ತಥಾ ।
ಶಙ್ಖಿನೀ ಚಕ್ರಿಣೀ ಬಾಣಾ ಭುಶುಣ್ಡೀ ಪರಿಘಾಯುಧಾ ॥೭೨॥

ಸೌಮ್ಯಾ ಸೌಮ್ಯತರಾಶೇಷಸೌಮ್ಯೇಭ್ಯಸ್ತ್ವತಿಸುನ್ದರೀ ।
ಪರಾ ಪರಾಣಾಂ ಪರಮಾ ತ್ವಮೇವ ಪರಮೇಶ್ವರೀ ॥೭೩॥

ಯಚ್ಚ ಕಿಂಚಿತ್ಕ್ವಚಿದ್ವಸ್ತು ಸದಸದ್ವಾಖಿಲಾತ್ಮಕೇ ।
ತಸ್ಯ ಸರ್ವಸ್ಯ ಯಾ ಶಕ್ತಿಃ ಸಾ ತ್ವಂ ಕಿಂ ಸ್ತೂಯಸೇ ಮಯಾ ॥೭೪॥

ಯಯಾ ತ್ವಯಾ ಜಗತ್ಸ್ರಷ್ಟಾ ಜಗತ್ಪಾತ್ಯತ್ತಿ ಯೋ ಜಗತ್ ।
ಸೋಽಪಿ ನಿದ್ರಾವಶಂ ನೀತಃ ಕಸ್ತ್ವಾಂ ಸ್ತೋತುಮಿಹೇಶ್ವರಃ ॥೭೫॥

---

೭೨. ದೇವಿಯೇ! ನೀನು ಖಡ್ಗ, ಶೂಲ, ಗದೆ, ಚಕ್ರ, ಶಂಖ, ಬಾಣ, ಬಿಲ್ಲು ಮತ್ತು ಪರಿಘವೆಂಬ ಬಗೆಬಗೆಯ ಆಯುಧಗಳನ್ನು ಧರಿಸಿದ ಮೂರ್ತಿಯುಳ್ಳವಳು. ಆದುದರಿಂದ ಘೋರಳಾದ ನೀನು ಭುಶುಂಡಿ ಎಂದು ಕರೆಯಲ್ಪಡುತ್ತೀಯೆ.

೭೩. ನೀನು ಅನುಗ್ರಹತೋರಲು ಯೋಗ್ಯರಾದ ವ್ಯಕ್ತಿಗಳಲ್ಲಿ ಸೌಮ್ಯಳು. ನೀನು ಲೋಕದಲ್ಲಿರುವ ಎಲ್ಲ ಸೌಮ್ಯವಸ್ತುಗಳಿಗಿಂತಲೂ ಹೆಚ್ಚಿನ ಸೌಮ್ಯಸ್ವರೂಪಳು. ನೀನು ಅತ್ಯಂತ ಸೌಂದರ್ಯವುಳ್ಳವಳು. ನೀನು ಸರ್ವೋತ್ತಮಳು. ನೀನು ಉತ್ತಮ ವಸ್ತುಗಳನ್ನೆಲ್ಲ ಮೀರಿಸಿರುವ ಉತ್ತಮ-ವಸ್ತುವು. ಮತ್ತು ನೀನೇ ಸರ್ವಸ್ವತಂತ್ರಳಾದ ಪರಮೇಶ್ವರಿಯಾಗಿರುತ್ತೀಯೆ.

೭೪. ವಿಶ್ವರೂಪಿಣಿಯಾದ ಜಗನ್ಮಾತೆಯೇ! ವಿಶ್ವದಲ್ಲಿ ಸತ್ ಅಥವಾ ಅಸತ್ ಎನಿಸಿಕೊಳ್ಳುವ ಯಾವ ವಸ್ತುವಿದ್ದರೂ ಆ ಎಲ್ಲ ವಸ್ತುಗಳಲ್ಲಿರುವ ಅಸಾಧಾರಣವಾದ ಶಕ್ತಿಯು ನೀನಾಗಿದ್ದೀಯೆ. ಹೀಗೆ ಸರ್ವಶಕ್ತಿಸ್ವರೂಪಳಾದ ನಿನ್ನನ್ನು ನಾನು ಏನೆಂದು ಸ್ತುತಿಸಲಿ?

೭೫. ಜಗತ್ತನ್ನು ಸೃಷ್ಟಿಸುವವನೂ, ಜಗತ್ತನ್ನು ಪಾಲಿಸುವವನೂ ಮತ್ತು ಜಗತ್ತನ್ನು ಸಂಹರಿಸುವವನೂ ಆದ ವಿಷ್ಣುಪರಮಾತ್ಮನು ಯಾವ ನಿನ್ನಿಂದ ನಿದ್ರಾಧೀನನಾಗಿ ಮಾಡಲ್ಪಟ್ಟಿರುವನೋ ಅಂತಹ ಪ್ರಭಾವವತಿಯಾದ ನಿನ್ನನ್ನು ಸ್ತುತಿಮಾಡಲು ಶಕ್ತನು ಯಾರು ಇರುವನು?

ವಿಷ್ಣುಃ ಶರೀರಗ್ರಹಣಮಹಮೀಶಾನ ಏವ ಚ ।
ಕಾರಿತಾಸ್ತೇ ಯತೋಽತಸ್ತ್ವಾಂ ಕಃ ಸ್ತೋತುಂ ಶಕ್ತಿಮಾನ್ಭವೇತ್ ॥೬೬॥

ಸಾ ತ್ವಮಿತ್ಥಂಪ್ರಭಾವೈಃ ಸ್ವೈರುದಾರೈರ್ದೇವಿ ಸಂಸ್ತುತಾ ।
ಮೋಹಯೈತೌ ದುರಾಧರ್ಷಾವಸುರೌ ಮಧುಕೈಟಭೌ ॥೬೭॥

ಪ್ರಬೋಧಂ ಚ ಜಗತ್ಸ್ವಾಮೀ ನೀಯತಾಮಚ್ಯುತೋ ಲಘು ।
ಬೋಧಶ್ಚ ಕ್ರಿಯತಾಮಸ್ಯ ಹನ್ತುಮೇತೌ ಮಹಾಸುರೌ ॥೬೮॥

ಋಷಿರುವಾಚ :—

ಏವಂ ಸ್ತುತಾ ತದಾ ದೇವೀ ತಾಮಸೀ ತತ್ರ ವೇಧಸಾ ।
ವಿಷ್ಣೋಃ ಪ್ರಬೋಧನಾರ್ಥಾಯ ನಿಹನ್ತುಂ ಮಧುಕೈಟಭೌ ॥೬೯॥

---

೬೬. ಯಾವ ಕಾರಣ ಸೃಷ್ಟಿ–ಸ್ಥಿತಿ–ಸಂಹಾರಕಾರಣರೆಂದು ಪ್ರಸಿದ್ಧ-ರಾಗಿರುವ ಬ್ರಹ್ಮ–ವಿಷ್ಣು–ಶಿವರೆಂಬ ತ್ರಿಮೂರ್ತಿಗಳಾದ ನಾವು ನಿನ್ನಿಂದ ದೇಹವನ್ನು ಗ್ರಹಿಸುವಂತೆ ಮಾಡಲ್ಪಟ್ಟಿರುವೆವೊ ಆ ಕಾರಣದಿಂದ ನಿನ್ನನ್ನು ಸ್ತೋತ್ರಮಾಡುವ ಶಕ್ತಿಯುಳ್ಳವನು ಯಾರಿರುವನು ?

೬೭. ಯೋಗನಿದ್ರಾದೇವಿಯೇ ! ಸರ್ವೇಶ್ವರಿಯಾದ ನೀನು ನಿನ್ನ ಉದಾರವಾದ ಪ್ರಭಾವ ವಿಶೇಷಗಳಿಂದ ಈ ರೀತಿಯಾಗಿ ಸ್ತುತಿಸಲ್ಪಟ್ಟಿದ್ದೀಯೆ. ಇತರರಿಂದ ಜಯಿಸಲು ಸಾಧ್ಯವಿಲ್ಲದ ಈ ಮಧು–ಕೈಟಭ ಅಸುರರನ್ನು ಮೋಹ-ಗೊಳಿಸು.

೬೮. ಮತ್ತು ಜಗತ್ತಿಗೆ ಸ್ವಾಮಿಯಾದ ವಿಷ್ಣುಪರಮಾತ್ಮನಿಗೆ ಬೇಗ ಪ್ರಬೋಧವನ್ನು ಉಂಟುಮಾಡು. ಹಾಗು ವಿಷ್ಣುವಿಗೆ ಈ ಮಧು–ಕೈಟಭ ಅಸುರರನ್ನು ನಾಶಮಾಡುವ ಬೋಧವು ಉದಯಿಸುವಂತೆ ಮಾಡು.

ಸುಮೇಧ ಋಷಿಯು ಹೀಗೆಂದನು :—

೬೯. ಆಗ ತಮೋಗುಣದ ಪ್ರಾಧಾನ್ಯದಿಂದ ಕೂಡಿರುವ ಯೋಗ-ನಿದ್ರಾದೇವಿಯು ಮಧು–ಕೈಟಭ ದಾನವರ ಸಂಹಾರಮಾಡಲು ವಿಷ್ಣುಪರಮಾತ್ಮ-ನನ್ನು ಎಚ್ಚರಗೊಳಿಸುವುದಕ್ಕೋಸ್ಕರ ಬ್ರಹ್ಮದೇವನಿಂದ ಈ ರೀತಿಯಾಗಿ ಸ್ತುತಿಮಾಡಲ್ಪಟ್ಟಳು.

ನೇತ್ರಾಸ್ಯನಾಸಿಕಾಬಾಹುಹೃದಯೇಭ್ಯಸ್ತಥೋರಸಃ ।
ನಿರ್ಗಮ್ಯ ದರ್ಶನೇ ತಸ್ಥೌ ಬ್ರಹ್ಮಣೋಽವ್ಯಕ್ತಜನ್ಮನಃ ॥೭೦॥

ಉತ್ತಸ್ಥೌ ಚ ಜಗನ್ನಾಥಸ್ತಯಾ ಮುಕ್ತೋ ಜನಾರ್ದನಃ ।
ಏಕಾರ್ಣವೇಽಹಿಶಯನಾತ್ತತಃ ಸ ದದೃಶೇ ಚ ತೌ ॥೭೧॥

ಮಧುಕೈಟಭೌ ದುರಾತ್ಮಾನಾವತಿವೀರ್ಯಪರಾಕ್ರಮೌ ।
ಕ್ರೋಧರಕ್ತೇಕ್ಷಣೌ ಹನ್ತುಂ ಬ್ರಹ್ಮಾಣಂ ಜನಿತೋದ್ಯಮೌ ॥೭೨॥

ಸಮುತ್ಥಾಯ ತತಸ್ತಾಭ್ಯಾಂ ಯುಯುಧೇ ಭಗವಾನ್ಹರಿಃ ।
ಪಞ್ಚವರ್ಷಸಹಸ್ರಾಣಿ ಬಾಹುಪ್ರಹರಣೋ ವಿಭುಃ ॥೭೩॥

---

೭೦. ಹೀಗೆ ಸ್ತುತಿಸಲ್ಪಟ್ಟ ಯೋಗನಿದ್ರೆಯು ವಿಷ್ಣುಪರಮಾತ್ಮನ ಕಣ್ಣು-ಮುಖ-ಮೂಗು-ತೋಳು-ಹೃದಯ ಮತ್ತು ಎದೆಯ ಭಾಗಗಳಿಂದ ಹೊರಕ್ಕೆ ಹೊರಟು ಬಂದು ಅವ್ಯಕ್ತತತ್ವದಿಂದ ಜನಿಸಿರುವ ಬ್ರಹ್ಮದೇವನ ಕಣ್ಣಿನ ಎದುರಿಗೆ ಕಾಣಿಸಿಕೊಂಡಳು.

೭೧. ಜಗತ್ತಿಗೆ ನಾಥನಾದ ಮತ್ತು ದುಷ್ಟಜನರನ್ನು ಮರ್ದಿಸುವ ಮಹಾವಿಷ್ಣುವು ಯೋಗನಿದ್ರೆಯಿಂದ ಬಿಡಲ್ಪಟ್ಟವನಾಗಿ ಏಕಾರ್ಣವದಂತಾದ ಸಮುದ್ರದಲ್ಲಿರುವ ಶೇಷಶಯನದಿಂದ ಎದ್ದು ಮಧು-ಕೈಟಭ ಅಸುರರನ್ನು ಕಂಡನು.

೭೨. ಸ್ವಾಮಿಯು ನೋಡುತ್ತಿರುವಾಗ ನೀಚಾತ್ಮರೂ, ಅತಿಯಾದ ವೀರ್ಯ-ಪರಾಕ್ರಮಗಳಿಂದ ಕೂಡಿದವರೂ ಆದ ಮಧು-ಕೈಟಭರು ಕೋಪ-ದಿಂದ ಕೆಂಪಾದ ಕಣ್ಣುಗಳುಳ್ಳವರಾಗಿ ಬ್ರಹ್ಮನನ್ನು ಕೊಲ್ಲಲು ಉದ್ಯಮಮಾಡು-ವವರಾಗಿದ್ದರು.

೭೩. ಸಮಸ್ತ ಐಶ್ವರ್ಯ ಸಂಪನ್ನನೂ, ಸರ್ವಶಕ್ತನೂ ಆದ ಮಹಾ-ವಿಷ್ಣುವು ಎದ್ದು ಬಂದು ಬಾಹುಗಳನ್ನು ಆಯುಧವನ್ನಾಗಿ ಉಪಯೋಗಿಸುತ್ತ ಐದು ಸಹಸ್ರ ವರ್ಷಗಳವರೆಗೆ ಮಧು-ಕೈಟಭರೊಂದಿಗೆ ಯುದ್ಧಮಾಡಿದನು.

**ತಾವಪ್ಯತಿಬಲೋನ್ಮತ್ತೌ ಮಹಾಮಾಯಾವಿಮೋಹಿತೌ ।**
**ಉಕ್ತವನ್ತೌ ವರೋಽಸ್ಮತ್ತೋ ವ್ರಿಯತಾಮಿತಿ ಕೇಶವಮ್ ॥೭೪॥**

**ಶ್ರೀ ಭಗವಾನುವಾಚ :—**

**ಭವೇತಾಮದ್ಯ ಮೇ ತುಷ್ಟೌ ಮಮ ವಧ್ಯಾವುಭಾವಪಿ ।**
**ಕಿಮನ್ಯೇನ ವರೇಣಾತ್ರ ಏತಾವದ್ಧಿ ವೃತಂ ಮಯಾ ॥೭೫॥**

**ಋಷಿರುವಾಚ :—**

**ವಞ್ಚಿತಾಭ್ಯಾಮಿತಿ ತದಾ ಸರ್ವಮಾಪೋಮಯಂ ಜಗತ್ ।**
**ವಿಲೋಕ್ಯ ತಾಭ್ಯಾಂ ಗದಿತೋ ಭಗವಾನ್ಕಮಲೇಕ್ಷಣಃ ॥೭೬॥**

---

೭೪. ಹೆಚ್ಚಾದ ಬಲದಿಂದ ಕೊಬ್ಬಿ ಅಹಂಕಾರಗೊಂಡ ಮಧು-ಕೈಟಭರು ಮಹಾಮಾಯೆಯಿಂದ ಮೋಹಗೊಳಿಸಲ್ಪಟ್ಟವರಾಗಿ ವಿಷ್ಣುವನ್ನು ಕುರಿತು "ಸುಪ್ರಸನ್ನರಾದ ನಮ್ಮಲ್ಲಿ ಏನು ಬೇಕಾದರೂ ವರವನ್ನು ಕೇಳಿಕೊ" ಎಂದು ಹೇಳಿದರು.

ವಿಷ್ಣು ಪರಮಾತ್ಮನು ಇಂತೆಂದನು :—

೭೫. ನೀವು ಈಗ ನನ್ನಲ್ಲಿ ಸಂತುಷ್ಟರಾಗಿ ವರಕೊಡಲು ಅನುಗ್ರಹಿಸುವುದಾದರೆ ನೀವಿಬ್ಬರೂ ನನಗೆ ವಧಾರ್ಹರಾಗಿರಿ. ಬ್ರಹ್ಮದೇವನನ್ನು ಕೊಲ್ಲಲು ಬಂದು ಐದುಸಹಸ್ರವರ್ಷಗಳವರೆಗೆ ನನ್ನೊಡನೆ ಯುದ್ಧಮಾಡಿರುವ ನಿಮ್ಮ ವಿಷಯದಲ್ಲಿ ಬೇರೆ ವರವು ಏಕೆ ಬೇಕಾಗಿದೆ? ಇದೊಂದು ವರವು ಮಾತ್ರ ನನ್ನಿಂದ ಕೇಳಲ್ಪಟ್ಟಿದೆ-

ಋಷಿಯು ಹೇಳಿದನು :—

೭೬. ಹೀಗೆ ಮಹಾಮಾಯೆಯ ವಕ್ರದೃಷ್ಟಿಯಿಂದ ವಂಚಿಸಲ್ಪಟ್ಟ ಮಧುಕೈಟಭ ಅಸುರರಿಂದ ಆಗ ಪ್ರಪಂಚವೆಲ್ಲವೂ ಜಲಪೂರ್ಣವಾದುದನ್ನು ನೋಡಿ ಸರ್ವೈಶ್ವರ್ಯಸಂಪೂರ್ಣನಾದ ವಿಷ್ಣುವು ಈ ರೀತಿಯಾಗಿ ಹೇಳಲ್ಪಟ್ಟನು.

ಪ್ರೀತೌ ಸ್ವಸ್ತವ ಯುದ್ಧೇನ ಶ್ಲಾಘ್ಯಸ್ತ್ವಂ ಮೃತ್ಯುರಾವಯೋಃ ।
ಆವಾಂ ಜಹಿ ನ ಯತ್ರೋರ್ವೀ ಸಲಿಲೇನ ಪರಿಪ್ಲುತಾ ||೭೭||

ಋಷಿರುವಾಚ :—

ತಥೇತ್ಯುಕ್ತ್ವಾ ಭಗವತಾ ಶಙ್ಖಚಕ್ರಗದಾಭೃತಾ ।
ಕೃತ್ವಾ ಚಕ್ರೇಣ ವೈ ಛಿನ್ನೇ ಜಘನೇ ಶಿರಸೀ ತಯೋಃ ||೭೮||

ಏವಮೇಷಾ ಸಮುತ್ಪನ್ನಾ ಬ್ರಹ್ಮಣಾ ಸಂಸ್ತುತಾ ಸ್ವಯಮ್ ।
ಪ್ರಭಾವಮಸ್ಯಾ ದೇವ್ಯಾಸ್ತು ಭೂಯಃ ಶೃಣು ವದಾಮಿ ತೇ ||೭೯||

ಇತಿ ಶ್ರೀ ಮಾರ್ಕಣ್ಡೇಯ ಮಹಾಪುರಾಣೇ ಸೂರ್ಯಸಾವರ್ಣಿಕೇ
ಮನ್ವನ್ತರೇ ಶ್ರೀದೇವೀಮಾಹಾತ್ಮ್ಯೇ ಮಧುಕೈಟಭವಧೋ
ನಾಮಾಷ್ಟಸಪ್ತತಿತಮೋಽಧ್ಯಾಯಃ

---

೭೭. ನಿನ್ನ ಯುದ್ಧ ನಿಪುಣತೆಯಿಂದ ನಾವು ಪ್ರೀತಿಹೊಂದಿರುವೆವು. ನೀನು ನಮ್ಮನ್ನು ವಧಿಸುವ ಶ್ಲಾಘ್ಯನಾದ ಮೃತ್ಯುವಾಗು. ಯಾವ ಪ್ರದೇಶದಲ್ಲಿ ಭೂಮಿಯು ನೀರಿನ ಆವರಣವಿಲ್ಲದೆ ಇದೆಯೋ ಅಲ್ಲಿ ನಮ್ಮನ್ನು ವಧಿಸು.

ಸುಮೇಧ ಋಷಿಯು ಹೇಳಿದನು :—

೭೮. ಶಂಖ-ಚಕ್ರ-ಗದೆಗಳನ್ನು ಧರಿಸಿರುವ ವಿಷ್ಣು ಪರಮಾತ್ಮನು "ಹಾಗೇ ಆಗಲಿ. ನೀರಿಲ್ಲದ ಭೂಪ್ರದೇಶದಲ್ಲಿ ನಿಮ್ಮನ್ನು ಕೊಲ್ಲುವೆನು" ಎಂದು ಹೇಳಿ ಆ ಅಸುರರ ಶಿರಗಳನ್ನು ತನ್ನ ಜಘನಭಾಗದಲ್ಲಿಟ್ಟುಕೊಂಡು ಚಕ್ರಾಯುಧದಿಂದ ಕತ್ತರಿಸಿದನು.

೭೯. ಹೀಗೆ ಈ ಮಹಾಮಾಯೆಯು ಬ್ರಹ್ಮದೇವನಿಂದ ಸಾಕ್ಷಾತ್ತಾಗಿ ಸ್ತುತಿಸಲ್ಪಟ್ಟವಳಾಗಿ ಆವಿರ್ಭಾವವನ್ನು ಹೊಂದಿದಳು. ಮತ್ತೆ ಈ ದೇವಿಯ ಪ್ರಭಾವವನ್ನು ನಾನು ವರ್ಣಿಸುತ್ತೇನೆ. ಅದನ್ನು ನೀನು ಕೇಳು.

ಮಾರ್ಕಂಡೇಯ ಮಹಾಪುರಾಣದಲ್ಲಿ ಎಪ್ಪತ್ತೆಂಟನೆಯ ಅಧ್ಯಾಯವು ಮುಗಿದುದು.

|| ಓಂ ಶ್ರೀ ದುರ್ಗಾಯೈ ನಮಃ ||

# ಮಾರ್ಕಂಡೇಯ ಪುರಾಣಂ

## ಏಕೋನಾಶೀತಿತಮೋಽಧ್ಯಾಯಃ

### (ದೇವತೇಜೋಭಾಗೈರ್ದೇವ್ಯಾವಿರ್ಭಾವಃ)

**ಋಷಿರುವಾಚ :—**

**ದೇವಾಸುರಮಭೂದ್ಯುದ್ಧಂ ಪೂರ್ಣಮಬ್ದಶತಂ ಪುರಾ ।**
**ಮಹಿಷೇಽಸುರಾಣಾಮಧಿಪೇ ದೇವಾನಾಂ ಚ ಪುರನ್ದರೇ ||೧||**

**ತತ್ರಾಸುರೈರ್ಮಹಾವೀರ್ಯೈರ್ದೇವಸೈನ್ಯಂ ಪರಾಜಿತಮ್ ।**
**ಜಿತ್ವಾ ಚ ಸಕಲಾನ್ದೇವಾನಿನ್ದ್ರೋಽಭೂನ್ಮಹಿಷಾಸುರಃ ||೨||**

---

## ಎಪ್ಪತ್ತೊಂಭತ್ತನೆಯ ಅಧ್ಯಾಯ

ಸುಮೇಧ ಋಷಿಯು ಹೇಳಿದನು :—

೧. ಹಿಂದೆ ಒಂದು ಕಲ್ಪದಲ್ಲಿ ಅಸುರರಿಗೆ ಮಹಿಷಾಸುರನು ಪ್ರಭುವಾಗಿರಲು, ಹಾಗು ದೇವತೆಗಳಿಗೆ ಇಂದ್ರನು ರಾಜನಾಗಿರಲು ದೇವ-ದಾನವರ ಯುದ್ಧವು ಸಂಪೂರ್ಣವಾಗಿ ಒಂದು ನೂರು ವರ್ಷಗಳ ವರೆಗೆ ನಡೆಯಿತು.

೨. ಆ ಯುದ್ಧದಲ್ಲಿ ಮಹತ್ತಾದ ವೀರ್ಯದಿಂದ ಸಂಪನ್ನರಾದ ಅಸುರರಿಂದ ದೇವತೆಗಳ ಸೈನ್ಯವು ಅಪಜಯವನ್ನು ಹೊಂದಿತು. ಹಾಗೆ ಸಕಲ ದೇವತೆಗಳನ್ನು ಗೆದ್ದು ಅಸುರರ ಪ್ರಭುವಾದ ಮಹಿಷಾಸುರನು ಇಂದ್ರಪದವಿಯನ್ನು ಏರಿದನು.

ತತಃ ಪರಾಜಿತಾ ದೇವಾಃ ಪದ್ಮಯೋನಿಂ ಪ್ರಜಾಪತಿಮ್ ।
ಪುರಸ್ಕೃತ್ಯ ಗತಾಸ್ತತ್ರ ಯತ್ರೇಶಗರುಡಧ್ವಜೌ ॥೩॥

ಯಥಾವೃತ್ತಂ ತಯೋಸ್ತದ್ವನ್ಮಹಿಷಾಸುರಚೇಷ್ಟಿತಮ್ ।
ತ್ರಿದಶಾಃ ಕಥಯಾಮಾಸುರ್ದೇವಾಭಿಭವವಿಸ್ತರಮ್ ॥೪॥

ಸೂರ್ಯೇನ್ದ್ರಾಗ್ನ್ಯನಿಲೇನ್ದೂನಾಂ ಯಮಸ್ಯ ವರುಣಸ್ಯ ಚ ।
ಅನ್ಯೇಷಾಂ ಚಾಧಿಕಾರಾನ್ ಸ ಸ್ವಯಮೇವಾಧಿತಿಷ್ಠತಿ ॥೫॥

ಸ್ವರ್ಗಾನ್ನಿರಾಕೃತಾಃ ಸರ್ವೇ ತೇನ ದೇವಗಣಾ ಭುವಿ ।
ವಿಚರನ್ತಿ ಯಥಾ ಮರ್ತ್ಯಾ ಮಹಿಷೇಣ ದುರಾತ್ಮನಾ ॥೬॥

---

೩. ತರುವಾಯ ಅಸುರರಿಂದ ಪರಾಜಯವನ್ನು ಹೊಂದಿದ ದೇವತೆಗಳು ವಿಷ್ಣುವಿನ ನಾಭಿಕಮಲದಲ್ಲಿ ಜನಿಸಿದ ಬ್ರಹ್ಮದೇವನನ್ನು ನಾಯಕನನ್ನಾಗಿ ಇರಿಸಿಕೊಂಡು ಮಹಾವಿಷ್ಣು ಮತ್ತು ಈಶ್ವರರು ಇದ್ದ ಸ್ಥಳಕ್ಕೆ ಹೋದರು.

೪. ಅಲ್ಲಿ ದೇವತೆಗಳು ಹರಿಹರರ ಮುಂದೆ ಹಿಂದೆ ನಡೆದಂತೆ ಮಹಿಷಾಸುರನ ಉದ್ಧತತನದ ಚೇಷ್ಟೆಯನ್ನೂ ಮತ್ತು ದೇವತೆಗಳಿಗೆ ಅವನಿಂದ ಆದ ಅಪಜಯವನ್ನೂ ವಿಸ್ತಾರವಾಗಿ ಹೇಳಿಕೊಂಡರು.

೫. ಆ ಅಸುರಾಧಿಪತಿಯಾದ ಮಹಿಷಾಸುರನು ಸೂರ್ಯ–ಇಂದ್ರ–ಅಗ್ನಿ–ವಾಯು-ಚಂದ್ರ-ಯಮ-ವರುಣ ಮತ್ತು ಮಿಕ್ಕ ದೇವತೆಗಳ ಅಧಿಕಾರಗಳನ್ನು ತಾನೇ ನಡೆಸುತ್ತಿರುವನು. ಆಯಾಯ ದೇವತೆಗಳನ್ನು ಸ್ವಪದದಿಂದ ಚ್ಯುತಿಗೊಳಿಸಿರುವನು.

೬. ನೀಚತನದ ಮಾನಸವುಳ್ಳವನಾಗಿ ಉದ್ಧತನಾಗಿ ಮೆರೆಯುವ ಮಹಿಷಾಸುರನಿಂದ ಸ್ವರ್ಗಭೋಗದಿಂದ ನಿರಾಕರಿಸಲ್ಪಟ್ಟ ಎಲ್ಲ ದೇವತೆಗಳ ಗುಂಪುಗಳು ಮರ್ತ್ಯಜಾತಿಯವರಂತೆ ಭೂಮಿಯಲ್ಲಿ ಸಂಚರಿಸುತ್ತಿರುವರು.

**ಏತದ್ವಃ ಕಥಿತಂ ಸರ್ವಮಮರಾರಿವಿಚೇಷ್ಟಿತಮ್ ।**
**ಶರಣಂ ವಃ ಪ್ರಪನ್ನಾಃ ಸ್ಮೋ ವಧಸ್ತಸ್ಯ ವಿಚಿನ್ತ್ಯತಾಮ್ ॥೭॥**

**ಋಷಿರುವಾಚ :—**

**ಇತ್ಥಂ ನಿಶಮ್ಯ ದೇವಾನಾಂ ವಚಾಂಸಿ ಮಧುಸೂದನಃ ।**
**ಚಕಾರ ಕೋಪಂ ಶಮ್ಭುಶ್ಚ ಭ್ರುಕುಟೀಕುಟಿಲಾನನೌ ॥೮॥**

**ತತೋಽತಿಕೋಪಪೂರ್ಣಸ್ಯ ಚಕ್ರಿಣೋ ವದನಾತ್ತತಃ ।**
**ನಿಶ್ಚಕ್ರಾಮ ಮಹತ್ತೇಜೋ ಬ್ರಹ್ಮಣಃ ಶಙ್ಕರಸ್ಯ ಚ ॥೯॥**

**ಅನ್ಯೇಷಾಂ ಚೈವ ದೇವಾನಾಂ ಶಕ್ರಾದೀನಾಂ ಶರೀರತಃ ।**
**ನಿರ್ಗತಂ ಸುಮಹತ್ತೇಜಸ್ತಚ್ಚೈಕ್ಯಂ ಸಮಗಚ್ಛತ ॥೧೦॥**

---

೭. ನಿಮಗೆ ದೇವಶತ್ರುವಾದ ಮಹಿಷಾಸುರನ ಸಂಪೂರ್ಣ ದುಷ್ಕೃತ್ಯವು ಈರೀತಿಯಾಗಿ ನಮ್ಮಿಂದ ಹೇಳಲ್ಪಟ್ಟಿರುವುದು. ನಾವು ನಿಮ್ಮಲ್ಲಿ ಶರಣಾಗತರಾಗಿರುವೆವು. ಮಹಿಷಾಸುರನನ್ನು ವಧಿಸುವ ಉಪಾಯವು ಚಿಂತಿಸ-ಲ್ಪಡಲಿ.

ಸುಮೇಧ ಋಷಿಯು ನುಡಿದನು :—

೮. ಹೀಗೆ ದೇವತೆಗಳು ಆಡಿದ ವಚನಗಳನ್ನು ಕೇಳಿ ವಿಷ್ಣು-ಈಶ್ವರರು ಇಬ್ಬರು ಹುಬ್ಬನ್ನು ಗಂಟಿಕ್ಕಿ ಭಯಂಕರವಾದ ಮುಖವುಳ್ಳವರಾಗಿ ಕೋಪ ತಾಳಿದರು.

೯. ಅನಂತರದಲ್ಲಿ ಮಿತಿಯನ್ನು ಮೀರಿ ಉದ್ರೇಕಗೊಂಡ ಕೋಪದಿಂದ ಪೂರ್ಣರಾದ ಮಹಾವಿಷ್ಣು-ಬ್ರಹ್ಮ-ಶಂಕರರ ಮುಖಗಳಿಂದ ಮಹತ್ತಾದ ತೇಜಃ-ಪುಂಜವು ಹೊರಕ್ಕೆ ಹೊರಟು ಬಂದಿತು.

೧೦. ಹಾಗು ಇಂದ್ರನೇ ಮೊದಲಾದ ಇತರ ದೇವತೆಗಳಿಂದ ಆಯಾಯ ವ್ಯಕ್ತಿಗಳ ಅಸಾಧಾರಣವಾದ ತೇಜಸ್ಸುಗಳು ಒಟ್ಟುಗೂಡಿ ಒಂದು ತೇಜಃಪುಂಜ-ವಾಯಿತು.

ಅತೀವ ತೇಜಸಃ ಕೂಟಂ ಜ್ವಲನ್ತಮಿವ ಪರ್ವತಮ್ ।
ದದೃಶುಸ್ತೇ ಸುರಾಸ್ತತ್ರ ಜ್ವಾಲಾವ್ಯಾಪ್ತದಿಗನ್ತರಮ್ ॥೧೧॥

ಅತುಲಂ ತತ್ರ ತತ್ತೇಜಃ ಸರ್ವದೇವಶರೀರಜಮ್ ।
ಏಕಸ್ಥಂ ತದಭೂನ್ನಾರೀವ್ಯಾಪ್ತಲೋಕತ್ರಯಂ ತ್ವಿಷಾ ॥೧೨॥

ಯದಭೂಚ್ಛಾಮ್ಭವಂ ತೇಜಸ್ತೇನಾಜಾಯತ ತನ್ಮುಖಮ್ ।
ಯಾಮ್ಯೇನ ಚಾಭವನ್ಕೇಶಾ ಬಾಹವೋ ವಿಷ್ಣುತೇಜಸಾ ॥೧೩॥

ಸೌಮ್ಯೇನ ಸ್ತನಯೋರ್ಯುಗ್ಮಂ ಮಧ್ಯಞ್ಚೈನ್ದ್ರೇಣ ಚಾಭವತ್ ।
ವಾರುಣೇನ ಚ ಜಙ್ಘೋರೂ ನಿತಮ್ಬಸ್ತೇಜಸಾ ಭುವಃ ॥೧೪॥

---

೧೧. ಆಗ ಅಲ್ಲಿ ಜ್ವಾಲೆಗಳ ಶ್ರೇಣಿಯಿಂದ ದಿಗಂತರಗಳನ್ನು ವ್ಯಾಪಿಸಿರುವುದೂ ಜ್ವಲಿಸುತ್ತಿದ್ದ ಪರ್ವತದಂತೆ ಇರುವುದೂ ಆದ ಭಾರಿಯಾದ ಆ ತೇಜಃಪುಂಜವನ್ನು ಆ ದೇವತೆಗಳು ಎಲ್ಲರೂ ನೋಡಿದರು.

೧೨. ಆ ದೇವ ಸಮಾಜದಲ್ಲಿ ಬ್ರಹ್ಮಾದಿಗಳ ಮುಖದಿಂದ ಹುಟ್ಟಿರುವುದೂ ಇತರ ದೇವಶರೀರಗಳಿಂದ ಹುಟ್ಟಿರುವುದೂ ಮತ್ತು ಕಾಂತಿಯಿಂದ ಲೋಕತ್ರಯವನ್ನು ವ್ಯಾಪಿಸಿರುವುದೂ ಆದ ಆ ತೇಜಃಪುಂಜವು ನಾರಿಯ ಆಕಾರವನ್ನು ಹೊಂದಿತು.

೧೩. ಆ ಪುಂಜದಲ್ಲಿದ್ದ ಶಂಭುವಿನ ತೇಜಸ್ಸಿನಿಂದ ನಾರಿಯ ಮುಖವಾಯಿತು. ಯಮನ ತೇಜಸ್ಸಿನಿಂದ ಕೂದಲುಗಳು ಆದುವು. ಮತ್ತು ವಿಷ್ಣುತೇಜಸ್ಸಿನಿಂದ ಬಾಹುಗಳಾದುವು.

೧೪. ಮತ್ತು ಸೋಮದೇವತೆಯ ತೇಜಸ್ಸಿನಿಂದ ನಾರಿಯ ಸ್ತನಯುಗ್ಮವಾಯಿತು. ಇಂದ್ರನ ತೇಜಸ್ಸಿನಿಂದ ನಡುವಾಯಿತು. ವರುಣದೇವನ ತೇಜಸ್ಸಿನಿಂದ ಮೊಣಕಾಲು-ತೊಡೆಗಳಾದುವು. ಮತ್ತು ಭೂದೇವಿಯ ತೇಜಸ್ಸಿನಿಂದ ಕಟಿಭಾಗವಾಯಿತು.

ಬ್ರಹ್ಮಣಸ್ತೇಜಸಾ ಪಾದೌ ತದಙ್ಗುಲ್ಯೋಽರ್ಕತೇಜಸಾ ।
ವಸೂನಾಂ ಚ ಕರಾಙ್ಗುಲ್ಯಃ ಕೌಬೇರೇಣ ಚ ನಾಸಿಕಾ ॥೧೫॥

ತಸ್ಯಾಸ್ತು ದನ್ತಾಃ ಸಮ್ಭೂತಾಃ ಪ್ರಾಜಾಪತ್ಯೇನ ತೇಜಸಾ ।
ನಯನತ್ರಿತಯಂ ಜಜ್ಞೇ ತಥಾ ಪಾವಕತೇಜಸಾ ॥೧೬॥

ಭ್ರುವೌ ಚ ಸನ್ಧ್ಯಯೋಸ್ತೇಜಃ ಶ್ರವಣಾವನಿಲಸ್ಯ ಚ ।
ಅನ್ಯೇಷಾಂ ಚೈವ ದೇವಾನಾಂ ಸಮ್ಭವಸ್ತೇಜಸಾಂ ಶಿವಾ ॥೧೭॥

ತತಃ ಸಮಸ್ತದೇವಾನಾಂ ತೇಜೋರಾಶಿಸಮುದ್ಭವಾಮ್ ।
ತಾಂ ವಿಲೋಕ್ಯ ಮುದಂ ಪ್ರಾಪುರಮರಾ ಮಹಿಷಾರ್ದಿತಾಃ ॥೧೮॥

---

೧೫. ಹಾಗು ಬ್ರಹ್ಮದೇವನ ತೇಜಸ್ಸಿನಿಂದ ನಾರಿಯ ಪಾದಗಳೂ, ಸೂರ್ಯನ ತೇಜಸ್ಸಿನಿಂದ ಅವಳ ಪಾದಾಂಗುಲಿಗಳೂ, ವಸುದೇವತೆಗಳ ತೇಜಸ್ಸಿನಿಂದ ಕೈಬೆರಳುಗಳೂ ಮತ್ತು ಕುಬೇರ ದೇವತೆಯ ತೇಜಸ್ಸಿನಿಂದ ನಾಸಿಕೇಂದ್ರಿಯವೂ ಪರಿಣಮಿಸಿದುವು.

೧೬. ಪ್ರಜಾಪತಿದೇವತೆಯ ತೇಜಸ್ಸಿನಿಂದ ನಾರಿಯ ದಂತಗಳು ಉಂಟಾದುವು. ಮತ್ತು ಅಗ್ನಿದೇವತೆಯ ತೇಜಸ್ಸಿನಿಂದ ಮೂರು ಕಣ್ಣುಗಳು ಜನಿಸಿದುವು.

೧೭. ಮತ್ತು ಎರಡು ಸಂಧ್ಯಾಕಾಲಗಳ ಅಭಿಮಾನಿನಿಯರಾದ ದೇವತೆಗಳ ತೇಜಸ್ಸಿನಿಂದ ಎರಡು ಹುಬ್ಬುಗಳು ಉಂಟಾದುವು. ಹಾಗು ಇತರ ದೇವತೆಗಳ ತೇಜೋರಾಶಿಯ ಪರಿಣಾಮವು ಸರ್ವಮಂಗಳೆಯಾದ ದೇವಿಯಾದಳು.

೧೮. ತರುವಾಯ ಸಮಸ್ತ ದೇವತೆಗಳ ತೇಜಸ್ಸಿನ ರಾಶಿಯಿಂದ ಜನಿಸಿದ ಆ ದೇವಿಯನ್ನು ನೋಡಿ ಮಹಿಷಾಸುರನಿಂದ ಪೀಡಿಸಲ್ಪಟ್ಟಿರುವ ದೇವತೆಗಳು ಸಂತೋಷಪಟ್ಟರು.

ತತೋ ದೇವಾ ದದುಸ್ತಸ್ಯೈ ಸ್ವಾನಿ ಸ್ವಾನ್ಯಾಯುಧಾನಿ ಚ ।
ಊಚುರ್ಜಯ ಜಯೇತ್ಯುಚ್ಚೈರ್ಜಯನ್ತೀಂ ತೇ ಜಯೈಷಿಣಃ॥೧೯॥

ಶೂಲಂ ಶೂಲಾದ್ವಿನಿಷ್ಕೃಷ್ಯ ದದೌ ತಸ್ಯೈ ಪಿನಾಕಭೃತ್ ।
ಚಕ್ರಂ ಚ ದತ್ತವಾನ್ ಕೃಷ್ಣಃ ಸಮುತ್ಪಾಟ್ಯ ಸ್ವಚಕ್ರತಃ ॥೨೦॥

ಶಙ್ಖಂ ಚ ವರುಣಃ ಶಕ್ತಿಂ ದದೌ ತಸ್ಯೈ ಹುತಾಶನಃ ।
ಮಾರುತೋ ದತ್ತವಾಂಶ್ಚಾಪಂ ಬಾಣಪೂರ್ಣೇ ತಥೇಷುಧೀ ॥೨೧॥

ವಜ್ರಮಿನ್ದ್ರಃ ಸಮುತ್ಪಾಟ್ಯ ಕುಲಿಶಾದಮರಾಧಿಪಃ ।
ದದೌ ತಸ್ಯೈ ಸಹಸ್ರಾಕ್ಷೋ ಘಣ್ಟಾಮೈರಾವತಾದ್ಗಜಾತ್ ॥೨೨॥

---

೧೯. ಅನಂತರದಲ್ಲಿ ಜಯಾರ್ಥಿಗಳಾದ ದೇವತೆಗಳು ಜಯಶಾಲಿನಿಯಾದ ದೇವಿಯನ್ನು ಕುರಿತು ಜಯ ಜಯ ಎಂದು ಜಯಘೋಷಮಾಡಿದರು. ತರುವಾಯ ದೇವತೆಗಳು ತಮ್ಮ ತಮ್ಮ ಆಯುಧಗಳನ್ನು ಆ ದೇವಿಗೆ ಕೊಟ್ಟರು.

೨೦. ಪಿನಾಕವೆಂಬ ಬಿಲ್ಲನ್ನು ಧರಿಸಿರುವ ಈಶ್ವರನು ತನ್ನ ಶೂಲದ ದೇವತಾಮೂರ್ತಿಯಿಂದ ಒಂದು ಶೂಲವನ್ನು ಸೆಳೆದು ದೇವಿಗೆ ಕೊಟ್ಟನು. ಹಾಗು ವಿಷ್ಣುವು ತನ್ನ ಚಕ್ರದಿಂದ ಒಂದು ಚಕ್ರಾಯುಧವನ್ನು ಸೆಳೆದು ಅರ್ಪಿಸಿದನು.

೨೧. ಹಾಗು ವರುಣನು ಶಂಖವನ್ನು ಕೊಟ್ಟನು. ಅಗ್ನಿದೇವನು ಶಕ್ತಿ ಆಯುಧವನ್ನು ಕೊಟ್ಟನು. ಮತ್ತು ವಾಯುದೇವನು ಬಿಲ್ಲನ್ನೂ ಬಾಣಗಳಿಂದ ತುಂಬಿರುವ ಬತ್ತಳಿಕೆಗಳನ್ನೂ ಕೊಟ್ಟನು.

೨೨. ದೇವತೆಗಳಿಗೆ ಅಧಿಪತಿಯೂ, ಸಹಸ್ರನೇತ್ರಗಳಿಂದ ಶೋಭಿತನೂ ಆದ ದೇವೇಂದ್ರನು ವಜ್ರಾಯುಧದಿಂದ ಬೇರೊಂದು ವಜ್ರಾಯುಧವನ್ನು ಸೆಳೆದು ಕೊಟ್ಟನು. ಮತ್ತು ಐರಾವತ ಆನೆಯಿಂದ ಘಂಟೆಯನ್ನು ತೆಗೆದುಕೊಟ್ಟನು.

**ಕಾಲದಣ್ಡಾದ್ಯಮೋ ದಣ್ಡಂ ಪಾಶಂ ಚಾಮ್ಬುಪತಿರ್ದದೌ ।**
**ಪ್ರಜಾಪತಿಶ್ಚಾಕ್ಷಮಾಲಾಂ ದದೌ ಬ್ರಹ್ಮಾ ಕಮಣ್ಡಲುಮ್ ॥೨೩॥**

**ಸಮಸ್ತರೋಮಕೂಪೇಷು ನಿಜರಶ್ಮೀನ್ ದಿವಾಕರಃ ।**
**ಕಾಲಶ್ಚ ದತ್ತವಾನ್ಖಡ್ಗಂ ತಸ್ಯೈ ಚರ್ಮ ಚ ನಿರ್ಮಲಮ್ ॥೨೪॥**

**ಕ್ಷೀರೋದಶ್ಚಾಮಲಂ ಹಾರಮಜರೇ ಚ ತಥಾಮ್ಬರೇ ॥೨೫॥**

**ಚೂಡಾಮಣಿಂ ತಥಾ ದಿವ್ಯಂ ಕುಣ್ಡಲೇ ಕಟಕಾನಿ ಚ ।**
**ಅರ್ಧಚನ್ದ್ರಂ ತಥಾ ಶುಭ್ರಂ ಕೇಯೂರಾನ್ ಸರ್ವಬಾಹುಷು॥೨೬॥**

**ನೂಪುರೌ ವಿಮಲೌ ತದ್ವದ್ಗ್ರೈವೇಯಕಮನುತ್ತಮಮ್ ।**
**ಅಙ್ಗುಲೀಯಕರತ್ನಾನಿ ಸಮಸ್ತಾಸ್ವಙ್ಗುಲೀಷು ಚ ॥೨೭॥**

---

೨೩. ಯಮನು ತನ್ನ ಕಾಲದಂಡದಿಂದ ದಂಡವನ್ನೂ, ಜಲಾಧಿದೇವತೆಯಾದ ವರುಣನು ಪಾಶಾಯುಧವನ್ನೂ ದೇವಿಗೆ ಕೊಟ್ಟರು. ಮತ್ತು ಪ್ರಜಾಪತಿದೇವತೆಯು ಅಕ್ಷಮಾಲೆಯನ್ನೂ, ಬ್ರಹ್ಮದೇವನು ಕಮಂಡಲುವನ್ನೂ ಕೊಟ್ಟರು.

೨೪. ಮತ್ತು ದಿನಾಧಿಪತಿಯಾದ ಸೂರ್ಯನು ದೇವಿಯ ಸಮಸ್ತ ರೋಮಕೂಪಗಳಲ್ಲಿ ತನ್ನ ರಶ್ಮಿಗಳನ್ನು ಅರ್ಪಿಸಿದನು. ಕಾಲದೇವತೆಯು ದೇವಿಗೆ ನಿರ್ಮಲವಾದ ಖಡ್ಗ, ಚರ್ಮಗಳನ್ನು ಕೊಟ್ಟಳು.

೨೫. ಕ್ಷೀರಸಮುದ್ರಾಭಿಮಾನಿಯಾದ ದೇವತೆಯು ದೇವತೆಗಳ ತೇಜಃಪುಂಜರೂಪಳಾದ ದೇವಿಗೆ ನಿರ್ಮಲವಾದ ಹಾರವನ್ನೂ ಮತ್ತು ಜೀರ್ಣವಲ್ಲದ ಹೊಸ ಬಟ್ಟೆಗಳನ್ನೂ ಕೊಟ್ಟಳು.

೨೬. ವಿಶ್ವಕರ್ಮನು ದೇವಿಗೆ ದಿವ್ಯವಾದ ಚೂಡಾಮಣಿ, ಕಟಕ, ಕುಂಡಲ ಮತ್ತು ಅರ್ಧಚಂದ್ರ ಇವುಗಳನ್ನು ಕೊಟ್ಟನು ಮತ್ತು ಎಲ್ಲ ಬಾಹುಗಳಲ್ಲಿಯೂ ಧರಿಸುವಂತಹ ಭುಜಕೀರ್ತಿಗಳನ್ನು ಕೊಟ್ಟನು.

೨೭. ಮತ್ತು ವಿಶ್ವಕರ್ಮನು ದೇವಿಗೆ ನಿರ್ಮಲವಾದ ಕಾಲುಗೆಜ್ಜೆಗಳನ್ನೂ ಸರ್ವೋತ್ತಮವಾದ ಕಂಠಾಭರಣವನ್ನೂ ಮತ್ತು ಎಲ್ಲ ಬೆರಳುಗಳಲ್ಲಿಯೂ ಧರಿಸುವಂತೆ ರತ್ನಾಂಗುಲೀಯಕಗಳನ್ನೂ ಅರ್ಪಿಸಿದನು.

ವಿಶ್ವಕರ್ಮಾ ದದೌ ತಸ್ಯೈ ಪರಶುಂ ಚಾತಿನಿರ್ಮಲಮ್ ।
ಅಸ್ತ್ರಾಣ್ಯನೇಕರೂಪಾಣಿ ತಥಾಭೇದ್ಯಂ ಚ ದಂಶನಮ್ ॥೨೮॥

ಅಮ್ಲಾನಪಙ್ಕಜಾಂ ಮಾಲಾಂ ಶಿರಸ್ಯುರಸಿ ಚಾಪರಾಮ್ ।
ಅದದಾಜ್ಜಲಧಿಸ್ತಸ್ಯೈ ಪಙ್ಕಜಂ ಚಾತಿಶೋಭನಮ್ ॥೨೯॥

ಹಿಮವಾನ್ ವಾಹನಂ ಸಿಹ್ಮಂ ರತ್ನಾನಿ ವಿವಿಧಾನಿ ಚ ।
ದದಾವಶೂನ್ಯಂ ಸುರಯಾ ಪಾನಪಾತ್ರಂ ಧನಾಧಿಪಃ ॥೩೦॥

ಶೇಷಶ್ಚ ಸರ್ವನಾಗೇಶೋ ಮಹಾಮಣಿವಿಭೂಷಿತಮ್ ।
ನಾಗಹಾರಂ ದದೌ ತಸ್ಯೈ ಧತ್ತೇ ಯಃ ಪೃಥಿವೀಮಿಮಾಮ್ ॥೩೧॥

---

೨೮. ಮತ್ತು ವಿಶ್ವಕರ್ಮಪ್ರಜಾಪತಿಯು ಆ ದೇವಿಗೆ ಥಳಥಳಿಸುವಂತಹ ನಿರ್ಮಲವಾದ ಕುಠಾರಾಯುಧವನ್ನು ಕೊಟ್ಟನು. ಹಾಗೆಯೇ ಅಭೇದ್ಯವಾದ ಕಂಚುಕವನ್ನೂ ಮತ್ತು ನಾನಾವಿಧವಾದ ಅಸ್ತ್ರಗಳನ್ನೂ ಕೊಟ್ಟನು.

೨೯. ಸಮುದ್ರಾಭಿಮಾನಿದೇವತೆಯು ಆದಿಶಕ್ತಿದೇವಿಗೆ ಶಿರಸ್ಸು ಮತ್ತು ಹೃದಯಗಳಿಗೆ ಭೂಷಣವಾಗುವ, ಬಾಡದಿರುವ ಸುಂದರ ಕಮಲಗಳಿಂದ ಕೂಡಿದ ಪುಷ್ಪಮಾಲೆಯನ್ನು ಅರ್ಪಿಸಿದಳು. ಮತ್ತು ಬಹಳ ಸುಂದರವಾದ ಒಂದು ಲೀಲಾಕಮಲವನ್ನು ಅರ್ಪಿಸಿದಳು.

೩೦. ಹಿಮವಂತನು ಸಿಂಹರೂಪವಾದ ವಾಹನವನ್ನೂ ವಿವಿಧವಾದ ರತ್ನಗಳನ್ನೂ ಕೊಟ್ಟನು. ಧನಾಧಿಪತಿಯಾದ ಕುಬೇರನು ಸುರೆಯಿಂದ ಪೂರ್ಣವಾದ ಪಾನಪಾತ್ರವನ್ನು ದೇವಿಗೆ ಕೊಟ್ಟನು.

೩೧. ಸಕಲ ಭೂಮಂಡಲವನ್ನು ಯಾವ ಆದಿಶೇಷನು ಹೊತ್ತುಕೊಂಡಿರುವನೋ ಆ ನಾಗಾಧಿಪತಿಯಾದ ಆದಿಶೇಷನು ಮಹಾರತ್ನಗಳಿಂದ ಅಲಂಕರಿಸಲ್ಪಟ್ಟ ನಾಗಹಾರವನ್ನು ದೇವಿಗೆ ಅರ್ಪಿಸಿದನು.

ಅನ್ಯೈರಪಿ ಸುರೈರ್ದೇವೀ ಭೂಷಣೈರಾಯುಧೈಸ್ತಥಾ ।
ಸಮ್ಮಾನಿತಾ ನನಾದೋಚ್ಚೈಃ ಸಾಟ್ಟಹಾಸಂ ಮುಹುರ್ಮುಹುಃ॥೩೨॥

ತಸ್ಯಾ ನಾದೇನ ಘೋರೇಣ ಕೃತ್ಸ್ನಮಾಪೂರಿತಂ ನಭಃ ।
ಅಮಾಯತಾತಿಮಹತಾ ಪ್ರತಿಶಬ್ದೋ ಮಹಾನಭೂತ್ ॥೩೩॥

ಚುಕ್ಷುಭುಃ ಸಕಲಾ ಲೋಕಾಃ ಸಮುದ್ರಾಶ್ಚ ಚಕಮ್ಪಿರೇ ।
ಚಚಾಲ ವಸುಧಾ ಚೇಲುಃ ಸಕಲಾಶ್ಚ ಮಹೀರುಹಾಃ ॥೩೪॥

ಜಯೇತಿ ದೇವಾಶ್ಚ ಮುದಾ ತಾಮೂಚುಃ ಸಿಹ್ಮವಾಹಿನೀಮ್ ।
ತುಷ್ಟುವುರ್ಮುನಯಶ್ಚೈನಾಂ ಭಕ್ತಿನಮ್ರಾತ್ಮಮೂರ್ತಯಃ ॥೩೫॥

---

೩೨- ಹೀಗೆ ಇತರ ದೇವತೆಗಳಿಂದಲೂ ಆಯುಧ-ಭೂಷಣಗಳನ್ನು ಒಪ್ಪಿಸಿ ಗೌರವಿಸಲ್ಪಟ್ಟ ಮಹಾದೇವಿಯು ಅಟ್ಟಹಾಸಮಾಡುತ್ತ ಮತ್ತೆ ಮತ್ತೆ ಗಟ್ಟಿಯಾಗಿ ಗರ್ಜಿಸಿದಳು.

೩೩. ಆ ದೇವಿಯ ಗಟ್ಟಿಯಾದ ಘೋರಗರ್ಜನೆಯು ಸಂಪೂರ್ಣವಾಗಿ ಆಕಾಶವನ್ನು ತುಂಬಿಸಿತು. ಆಕಾಶದಲ್ಲಿ ಹಿಡಿಯಲಾರದ ಆ ಗರ್ಜನೆಯ ಧ್ವನಿಯಿಂದ ದೊಡ್ಡ ಪ್ರತಿಧ್ವನಿಯುಂಟಾಯಿತು.

೩೪. ಸಮಸ್ತ ಲೋಕಗಳು ಕ್ಷೋಭಗೊಂಡುವು. ಸಮುದ್ರಗಳು ಚಲಿಸಿ ಉಕ್ಕಿಬಂದುವು. ಭೂಮಿಯು ಚಲಿಸಿತು. ಮತ್ತು ಸಕಲ ಪರ್ವತಗಳು ಧ್ವನಿಯಿಂದ ಅಲ್ಲಾಡಿಹೋದುವು.

೩೫. ಆಗ ದೇವತೆಗಳು ಸಿಂಹವನ್ನು ಏರಿರುವ ಆ ದೇವಿಯನ್ನು ನೋಡಿ "ಜಯವನ್ನು ಗಳಿಸು" ಎಂದು ಸಂತೋಷದಿಂದ ಹೇಳಿ ಜಯ-ಘೋಷಣೆಯ ಗೌರವವನ್ನು ತೋರಿಸಿದರು. ಮುನಿಜನರು ಭಕ್ತಿಯಿಂದ ಬಗ್ಗಿದ ದೇಹವುಳ್ಳವರಾಗಿ ದೇವಿಯನ್ನು ಸ್ತುತಿಮಾಡಿದರು.

ದೃಷ್ಟ್ವಾ ಸಮಸ್ತಂ ಸಂಕ್ಷುಬ್ಧಂ ತ್ರೈಲೋಕ್ಯಮಮರಾರಯಃ ।
ಸನ್ನದ್ಧಾಖಿಲಸೈನ್ಯಾಸ್ತೇ ಸಮುತ್ತಸ್ಥುರುದಾಯುಧಾಃ ॥೩೬॥

ಆಃ ಕಿಮೇತದಿತಿ ಕ್ರೋಧಾದಾಭಾಷ್ಯ ಮಹಿಷಾಸುರಃ ।
ಅಭ್ಯಧಾವತ ತಂ ಶಬ್ದಮಶೇಷೈರಸುರೈರ್ವೃತಃ ॥೩೭॥

ಸ ದದರ್ಶ ತತೋ ದೇವೀಂ ವ್ಯಾಪ್ತಲೋಕತ್ರಯಾಂ ತ್ವಿಷಾ ।
ಪಾದಾಕ್ರಾನ್ತ್ಯಾ ನತಭುವಂ ಕಿರೀಟೋಲ್ಲಿಖಿತಾಮ್ಬರಾಮ್ ॥೩೮॥

ಕ್ಷೋಭಿತಾಶೇಷಪಾತಾಲಾಂ ಧನುರ್ಜ್ಯಾನಿಸ್ಸ್ವನೇನ ತಾಮ್ ।
ದಿಶೋ ಭುಜಸಹಸ್ರೇಣ ಸಮನ್ತಾದ್ವ್ಯಾಪ್ಯ ಸಂಸ್ಥಿತಾಮ್ ॥೩೯॥

---

೩೬. ಮೂರು ಲೋಕಗಳೆಲ್ಲವೂ ಕ್ಷೋಭೆಗೊಂಡಿರುವುದನ್ನು ಕಂಡು ದೇವತೆಗಳ ಶತ್ರುಗಳಾದ ರಾಕ್ಷಸರು ಸನ್ನಾಹಗೊಳಿಸಿದ ಸಕಲ ಚತುರಂಗ ಸೈನ್ಯವುಳ್ಳವರಾಗಿ ಯುದ್ಧರಭಸದಿಂದ ಆಯುಧಗಳನ್ನು ಮೇಲಕ್ಕೆ ಎತ್ತುತ್ತ ಮೇಲಕ್ಕೆದ್ದರು-

೩೭. ಮಹಿಷಾಸುರನು "ಓಹೋ! ಇದೇನು" ಎಂದು ಕೋಪಾವೇಶದಿಂದ ಗರ್ಜಿಸುತ್ತ ತನ್ನ ಸಮಸ್ತ ಸೈನ್ಯದಿಂದ ಕೂಡಿದವನಾಗಿ ಶಬ್ದವು ಕೇಳಿಸಿಬಂದ ಕಡೆಗೆ ಓಡಿಬಂದನು.

೩೮. ಮಹಿಷಾಸುರನು ಅಲ್ಲಿ ಪಾದಗಳನ್ನು ಇಡುವ ಆಘಾತದಿಂದ ತಗ್ಗಿಹೋದ ನೆಲವುಳ್ಳವಳೂ, ಕಿರೀಟದ ಅಗ್ರಭಾಗದಿಂದ ಗೀರಿದಂತಿರುವ ಆಕಾಶವುಳ್ಳವಳೂ ಮತ್ತು ತನ್ನ ಪ್ರಭೆಯಿಂದ ಮೂರು ಲೋಕಗಳನ್ನು ವ್ಯಾಪಿಸಿದವಳೂ ಆದ ದೇವಿಯನ್ನು ಕಂಡನು.

೩೯. ಮತ್ತು ಆ ದೇವಿಯು ಹೆದೆಯೇರಿಸಿದ ಬಿಲ್ಲಿನ ಹುರಿಯನ್ನೆಳೆದು ಮಾಡಿದ ಟಂಕಾರಶಬ್ದದಿಂದ ಕ್ಷೋಭಗೊಳಿಸಿದ ಸಕಲ ಪಾತಾಳಲೋಕವುಳ್ಳವಳೂ ಮತ್ತು ಸಹಸ್ರಭುಜಗಳಿಂದ ಸುತ್ತಲೂ ದಿಙ್ಮಂಡಲವನ್ನು ಆವರಿಸಿ ನಿಂತವಳೂ ಆಗಿದ್ದಳು.

ತತಃ ಪ್ರವವೃತೇ ಯುದ್ಧಂ ತಯಾ ದೇವ್ಯಾ ಸುರದ್ವಿಷಾಮ್ ।
ಶಸ್ತ್ರಾಸ್ತ್ರೈರ್ಬಹುಧಾ ಮುಕ್ತೈರಾದೀಪಿತದಿಗನ್ತರಮ್ ॥೪೦॥

ಮಹಿಷಾಸುರಸೇನಾನೀಶ್ಚಿಕ್ಷುರಾಖ್ಯೋ ಮಹಾಸುರಃ ।
ಯುಯುಧೇ ಚಾಮರಶ್ಚಾನ್ಯೈಶ್ಚತುರಙ್ಗಬಲಾನ್ವಿತಃ ॥೪೧॥

ರಥಾನಾಮಯುತೈಃ ಷಡ್ಭಿರುದಗ್ರಾಖ್ಯೋ ಮಹಾಸುರಃ ।
ಅಯುಧ್ಯತಾಯುತಾನಾಂ ಚ ಸಹಸ್ರೇಣ ಮಹಾಹನುಃ ॥೪೨॥

ಪಞ್ಚಾಶದ್ಭಿಶ್ಚ ನಿಯುತೈರಸಿಲೋಮಾ ಮಹಾಸುರಃ ।
ಅಯುತಾನಾಂ ಶತೈಃ ಷಡ್ಭಿರ್ಬಾಷ್ಕಲೋ ಯುಯುಧೇ ರಣೇ॥೪೩॥

---

೪೦. ತರುವಾಯ ದೇವಶತ್ರುಗಳಾದ ಅಸುರರಿಗೆ ದೇವಿಯೊಡನೆ ನಾನಾವಿಧವಾಗಿ ಪ್ರಯೋಗಿಸಿದ ಶಸ್ತ್ರ–ಅಸ್ತ್ರಗಳ ತೇಜೋಜ್ವಾಲೆಯಿಂದ ಬೆಳಗಿದ ದಿಕ್ಕು-ಮೂಲೆಗಳಿರುವಂತೆ ಯುದ್ಧವು ಜರುಗಿತು.

೪೧. ಮಹಿಷಾಸುರನ ಸೇನಾನಾಯಕನಾದ ಚಿಕ್ಷುರ ಎಂಬ ನಾಮಾಂಕಿತನಾದ ಅಸುರನೂ ಮತ್ತೊಬ್ಬ ಚಾಮರ ಎಂಬ ನಾಮಾಂಕಿತನಾದ ಅಸುರನೂ ಆನೆ–ಕುದುರೆ–ರಥ–ಪದಾತಿಸೈನ್ಯದೊಡನೆ ಹೋಗಿ ಯುದ್ಧ–ಮಾಡಿದರು.

೪೨. ಉದಗ್ರ ಎಂಬ ಹೆಸರುಳ್ಳ ಒಬ್ಬ ಮಹಾಅಸುರನು ಅರವತ್ತು ಸಹಸ್ರ ರಥಸೈನ್ಯದೊಡನೆ ಬಂದು ಯುದ್ಧಮಾಡಿದನು. ಹಾಗು ಮಹಾಹನು ಎಂಬ ಅಸುರನು ಸಹಸ್ರ ಅಯುತ ಸಂಖ್ಯೆಯ ರಥಸೈನ್ಯದೊಡನೆ ಬಂದು ಯುದ್ಧಮಾಡಿದನು.

೪೩. ಕತ್ತಿಯಂತೆ ರೋಮಗಳುಳ್ಳವನೆಂಬ ಅನ್ವರ್ಥನಾಮಾಂಕಿತನಾದ ಅಸಿಲೋಮರಾಕ್ಷಸನು ಐವತ್ತು ನಿಯುತ (ಐದುಕೋಟಿ) ಸಂಖ್ಯೆಯ ರಥಸಾಧನ–ದಿಂದಲೂ ಬಾಷ್ಕಲವೆಂಬ ನಾಮಾಂಕಿತನಾದ ಅಸುರನು ಆರುನೂರು ಅಯುತ (ಅರವತ್ತುಲಕ್ಷ) ರಥಸಾಧನದಿಂದಲೂ ಕೂಡಿ ಯುದ್ಧರಂಗದಲ್ಲಿ ದೇವಿಯ ಸಂಗಡ ಯುದ್ಧಮಾಡಿದರು.

ಗಜವಾಜಿಸಹಸ್ರೌಘೈರನೇಕೈರುಗ್ರದರ್ಶನಃ ।
ವೃತೋ ರಥಾನಾಂ ಕೋಟ್ಯಾ ಚ ಯುದ್ಧೇ ತಸ್ಮಿನ್ನಯುಧ್ಯತ ॥೪೪॥

ಬಿಡಾಲಾಖ್ಯೋ ಮಹಾದೈತ್ಯಃ ಪಞ್ಚಾಶದ್ಭಿರಥಾಯುತೈಃ ।
ಯುಯುಧೇ ಸಂಯುಗೇ ತತ್ರ ರಥಾನಾಂ ಪರಿವಾರಿತಃ ॥೪೫॥

ವೃತಃ ಕಾಲೋ ರಥಾನಾಂ ಚ ರಣೇ ಪಞ್ಚಾಶತಾಯುತೈಃ ।
ಯುಯುಧೇ ಸಂಯುಗೇ ತತ್ರ ತಾವದ್ಭಿಃ ಪರಿವಾರಿತಃ ॥೪೬॥

ಅನ್ಯೇ ಚ ತತ್ರಾಯುತಶೋ ರಥನಾಗಹಯೈರ್ವೃತಾಃ ।
ಯುಯುಧುಃ ಸಂಯುಗೇ ದೇವ್ಯಾ ಸಹ ತತ್ರ ಮಹಾಸುರಾಃ ॥೪೭॥

---

೪೪. ಹಾಗು ಉಗ್ರದರ್ಶನ ಎಂಬ ಹೆಸರುಳ್ಳ ಮಹಾದೈತ್ಯನು ಅನೇಕ ಸಹಸ್ರ ಸಂಖ್ಯೆಯ ಆನೆ-ಕುದುರೆಗಳ ಸೈನ್ಯಸಮೂಹದಿಂದಲೂ ಒಂದು ಕೋಟಿ ರಥಸೈನ್ಯದಿಂದಲೂ ಸಮೇತನಾಗಿ ಆ ಯುದ್ಧ ಸಮಯದಲ್ಲಿ ಯುದ್ಧಮಾಡಿದನು.

೪೫. ಮತ್ತು ಬಿಡಾಲ ಎಂಬ ಹೆಸರುಳ್ಳ ಮಹಾದೈತ್ಯನು ಐವತ್ತು ಅಯುತ (ಐದುಲಕ್ಷ) ಸಂಖ್ಯೆಯ ರಥಸೈನ್ಯಪರಿವಾರವುಳ್ಳವನಾಗಿ ಆ ಯುದ್ಧದಲ್ಲಿ ಯುದ್ಧಮಾಡಿದನು.

೪೬. ಕಾಲ ಎಂದು ಕರೆಯಲ್ಪಡುವ ಬೇರೊಬ್ಬ ಅಸುರನು ಆ ಯುದ್ಧದಲ್ಲಿ ಐದುನೂರು ಅಯುತ (ಐದುಲಕ್ಷ) ಸಂಖ್ಯೆಯ ರಥಪರಿವಾರ ಸಮೇತನಾಗಿ ಯುದ್ಧಮಾಡಿದನು. ಮತ್ತು ಅವನು ಅದೇ ಸಂಖ್ಯೆಯ ಆನೆ-ಕುದುರೆ-ಕಾಲಾಳು ಸೈನ್ಯಸಮೇತನೂ ಆಗಿ ಯುದ್ಧಮಾಡಿದನು.

೪೭. ಮತ್ತೆ ಕೆಲವು ಮಂದಿ ಮಹಾ ಅಸುರರು ಹತ್ತು ಹತ್ತು ಸಹಸ್ರ ಸಂಖ್ಯೆಯ ರಥ-ಗಜ-ಅಶ್ವಸೈನ್ಯದಿಂದ ಕೂಡಿದವರಾಗಿ ಆ ಯುದ್ಧದಲ್ಲಿ ದೇವಿಯೊಡನೆ ಯುದ್ಧಮಾಡಿದರು.

ಕೋಟಿಕೋಟಿಸಹಸ್ರೈಸ್ತು ರಥಾನಾಂ ದನ್ತಿನಾಂ ತಥಾ ।
ಹಯಾನಾಂ ಚ ವೃತೋ ಯುದ್ಧೇ ತತ್ರಾಭೂನ್ಮಹಿಷಾಸುರಃ ॥೪೮॥

ತೋಮರೈರ್ಭಿನ್ದಿಪಾಲೈಶ್ಚ ಶಕ್ತಿಭಿರ್ಮುಸಲೈಸ್ತಥಾ ।
ಯುಯುಧುಃ ಸಂಯುಗೇ ದೇವ್ಯಾ ಖಡ್ಗೈಃ ಪರಶುಪಟ್ಟಿಶೈಃ ॥೪೯॥

ಕೇಚಿಚ್ಚ ಚಿಕ್ಷಿಪುಃ ಶಕ್ತೀಃ ಕೇಚಿತ್ಪಾಶಾಂಸ್ತಥಾಪರೇ ।
ದೇವೀಂ ಖಡ್ಗಪ್ರಹಾರೈಸ್ತು ತೇ ತಾಂ ಹನ್ತುಂ ಪ್ರಚಕ್ರಮುಃ ॥೫೦॥

ಸಾಪಿ ದೇವೀ ತತಸ್ತಾನಿ ಶಸ್ತ್ರಾಣ್ಯಸ್ತ್ರಾಣಿ ಚಣ್ಡಿಕಾ ।
ಲೀಲಯೈವ ಪ್ರಚಿಚ್ಛೇದ ನಿಜಶಸ್ತ್ರಾಸ್ತ್ರವರ್ಷಿಣೀ ॥೫೧॥

ಅನಾಯಸ್ತಾನನಾ ದೇವೀ ಸ್ತೂಯಮಾನಾ ಸುರರ್ಷಿಭಿಃ ।
ಮುಮೋಚಾಸುರದೇಹೇಷು ಶಸ್ತ್ರಾಣ್ಯಸ್ತ್ರಾಣಿ ಚೇಶ್ವರೀ ॥೫೨॥

---

೪೮. ಆಗ ಮಹಿಷಾಸುರನು ಸಹಸ್ರಾರು ಕೋಟಿ ಕೋಟಿ ಸಂಖ್ಯೆಯಷ್ಟು ರಥ-ಗಜ-ಅಶ್ವ ಸೈನ್ಯದೊಡಗೂಡಿದವನೂ ಹಾಗು ಅನೇಕ ಪದಾತಿಸೈನ್ಯದಿಂದ ಕೂಡಿದವನೂ ಆಗಿ ಅಲ್ಲಿ ಯುದ್ಧಮಾಡಿದನು.

೪೯. ಆ ಯುದ್ಧದಲ್ಲಿ ರಾಕ್ಷಸರು ತೋಮರ-ಭಿಂಡಿಪಾಲ-ಶಕ್ತಿ-ಮುಸಲ-ಖಡ್ಗ-ಪರಶು ಮತ್ತು ಪಟ್ಟಿಶವೆಂದು ಕರೆಯುವ ಬಗೆಬಗೆಯ ಆಯುಧಗಳನ್ನು ಪ್ರಯೋಗಿಸಿ ದೇವಿಯೊಡನೆ ಯುದ್ಧಮಾಡಿದರು.

೫೦. ಆ ಪ್ರಸಂಗದಲ್ಲಿ ಕೆಲವರು ಶಕ್ತಿ ಆಯುಧಗಳನ್ನು ಎಸೆದರು. ಕೆಲವರು ಪಾಶಾಯುಧವನ್ನು ಬಿಟ್ಟರು. ಮತ್ತೆ ಕೆಲವರು ಖಡ್ಗಪ್ರಹಾರಗಳಿಂದ ಆ ದೇವಿಯನ್ನು ಕೊಲ್ಲಬೇಕೆಂದು ಯುದ್ಧವನ್ನು ಪ್ರಾರಂಭಿಸಿದರು.

೫೧. ತರುವಾಯ ಆ ಚಂಡಿಕಾದೇವಿಯು ತನ್ನ ಶಸ್ತ್ರಾಸ್ತ್ರಗಳನ್ನು ರಾಕ್ಷಸರ ಮೇಲೆ ಪ್ರಯೋಗಿಸುತ್ತ ಅವರಿಂದ ಬಂದ ಶಸ್ತ್ರಾಸ್ತ್ರಗಳನ್ನು ಅನಾಯಾಸವಾಗಿ ಕತ್ತರಿಸಿದಳು.

೫೨. ಸರ್ವೇಶ್ವರಿಯಾದ ಚಂಡಿಕಾದೇವಿಯು ಸ್ವಲ್ಪವೂ ಆಯಾಸವಿಲ್ಲದ ಮುಖವುಳ್ಳವಳಾಗಿ ದೇವತೆಗಳು ಮತ್ತು ಋಷಿಗಳಿಂದ ಸ್ತುತಿಸಲ್ಪಡುತ್ತ ರಾಕ್ಷಸ ದೇಹಗಳಲ್ಲಿ ಶಸ್ತ್ರಾಸ್ತ್ರಗಳನ್ನು ಸುರಿಸಿದಳು.

ಸೋಽಪಿ ಕ್ರುದ್ಧೋ ಧುತಸಟೋ ದೇವ್ಯಾ ವಾಹನಕೇಸರೀ ।
ಚಚಾರಾಸುರಸೈನ್ಯೇಷು ವನೇಷ್ವಿವ ಹುತಾಶನಃ ॥೫೩॥

ನಿಶ್ವಾಸಾನ್ಮುಮುಚೇ ಯಾಂಶ್ಚ ಯುಧ್ಯಮಾನಾ ರಣೇಽಮ್ಬಿಕಾ ।
ತ ಏವ ಸದ್ಯಃ ಸಮ್ಭೂತಾ ಗಣಾಃ ಶತಸಹಸ್ರಶಃ ॥೫೪॥

ಯುಯುಧುಸ್ತೇ ಪರಶುಭಿರ್ಭಿನ್ದಿಪಾಲಾಸಿಪಟ್ಟಿಶೈಃ ।
ನಾಶಯನ್ತೋಽಸುರಗಣಾನ್ ದೇವೀಶಕ್ತ್ಯುಪಬೃಂಹಿತಾಃ ॥೫೫॥

ಅವಾದಯನ್ತ ಪಟಹಾನ್ ಗಣಾಃ ಶಙ್ಖಾಂಸ್ತಥಾಪರೇ ।
ಮೃದಙ್ಗಾಂಶ್ಚ ತಥೈವಾನ್ಯೇ ತಸ್ಮಿನ್ಯುದ್ಧಮಹೋತ್ಸವೇ ॥೫೬॥

ತತೋ ದೇವೀ ತ್ರಿಶೂಲೇನ ಗದಯಾ ಶರವೃಷ್ಟಿಭಿಃ ।
ಖಡ್ಗಾದಿಭಿಶ್ಚ ಶತಶೋ ನಿಜಘಾನ ಮಹಾಸುರಾನ್ ॥೫೭॥

---

೫೩. ಅಷ್ಟರಲ್ಲಿ ದೇವಿಯ ವಾಹನವಾಗಿದ್ದ ಸಿಂಹವು ಕೋಪಗೊಂಡು ತನ್ನ ಜಡೆಗಳನ್ನು ಕೊಡವಿಕೊಂಡು ಕಾಡುಗಳಲ್ಲಿ ಬೆಂಕಿಯು ಆವರಿಸುವಂತೆ ಅಸುರ ಸೈನ್ಯವನ್ನು ಆವರಿಸಿ ಸಂಚರಿಸಿತು.

೫೪. ರಣರಂಗದಲ್ಲಿ ಯುದ್ಧಮಾಡುತ್ತಿದ್ದ ಚಂಡಿಕಾದೇವಿಯು ಯಾವ ನಿಟ್ಟುಸಿರುಗಳನ್ನು ಬಿಟ್ಟಳೊ ಆ ಉಸಿರುಗಳು ಕೂಡಲೆ ಶತ-ಸಹಸ್ರ ಮುಂತಾದ ಅಧಿಕಸಂಖ್ಯೆಯಲ್ಲಿ ತನ್ನ ಪರಿವಾರಗಣಗಳಾದುವು.

೫೫. ತತ್‌ಕ್ಷಣದಲ್ಲಿ ದೇವಿಯ ಶಕ್ತಿಯಿಂದ ಬಲಗೊಂಡ ಗಣಗಳು ಪರಶು-ಭಿಂಡಿಪಾಲ-ಅಸಿ-ಪಟ್ಟಿಶವೆಂಬ ಆಯುಧಗಳನ್ನು ಹಿಡಿದು ಅಸುರಗಣ-ಗಳನ್ನು ನಾಶಮಾಡುತ್ತ ಯುದ್ಧಮಾಡಿದರು.

೫೬. ಯುದ್ಧಮಾಡುವ ವೀರರಿಗೆ ಉತ್ಸವವಂತಿರುವ ಆ ಯುದ್ಧದಲ್ಲಿ ಕೆಲವರು ದೇವಿಯ ಗಣಗಳು ನಗಾರಿಗಳನ್ನೂ, ಮತ್ತೆ ಕೆಲವರು ಶಂಖಗಳನ್ನೂ ಇನ್ನು ಕೆಲವರು ಮೃದಂಗವಾದ್ಯಗಳನ್ನೂ ಧ್ವನಿಗೈದರು.

೫೭. ತರುವಾಯ ಚಂಡಿಕಾಂಬಿಕೆಯು ತ್ರಿಶೂಲ, ಗದೆ ಮತ್ತು ಬಾಣಗಳ ಸುರಿಮಳೆಗಳಿಂದಲೂ ಮತ್ತು ಖಡ್ಗ ಮುಂತಾದ ಆಯುಧಗಳ ಪ್ರಯೋಗದಿಂದಲೂ ಅನೇಕಮಂದಿ ರಾಕ್ಷಸರನ್ನು ವಧಿಸಿದಳು.

ಪಾತಯಾಮಾಸ ಚೈವಾನ್ಯಾನ್ ಘಂಟಾಸ್ವನವಿಮೋಹಿತಾನ್ ।
ಅಸುರಾನ್ಭುವಿ ಪಾಶೇನ ಬದ್ಧ್ವಾ ಚಾನ್ಯಾನಕರ್ಷಯತ್ ॥೫೮॥

ಕೇಚಿದ್ದ್ವಿಧಾಕೃತಾಸ್ತೀಕ್ಷ್ಣೈಃ ಖಡ್ಗಪಾತೈಸ್ತಥಾ ಪರೇ ।
ವಿಪೋಥಿತಾ ನಿಪಾತೇನ ಗದಯಾ ಭುವಿ ಶೇರತೇ ॥೫೯॥

ವೇಮುಶ್ಚ ಕೇಚಿದ್ರುಧಿರಂ ಮುಸಲೇನ ಭೃಶಂ ಹತಾಃ ।
ಕೇಚಿನ್ನಿಪತಿತಾ ಭೂಮೌ ಭಿನ್ನಾಃ ಶೂಲೇನ ವಕ್ಷಸಿ ॥೬೦॥

ನಿರನ್ತರಶರೌಘೇಣ ಕೃತ್ತಾಃ ಕೇಚಿದ್ರಣಾಜಿರೇ ।
ಶೈಲಾನುಕಾರಿಣಃ ಪ್ರಾಣಾನ್ಮುಮುಚುಸ್ತ್ರಿದಶಾರ್ದನಾಃ ॥೬೧॥

---

೫೮. ಮತ್ತು ದೇವಿಯು ಕೆಲವರು ಮಹಾಸುರರನ್ನು ಘಂಟೆಯ ಧ್ವನಿಯಿಂದ ಮೂರ್ಛೆಗೊಳ್ಳುವಂತೆ ಮಾಡಿ ಕೆಡವಿದಳು. ಇನ್ನು ಕೆಲವರನ್ನು ಪಾಶದಿಂದ ಕಟ್ಟಿ ಭೂಮಿಯಲ್ಲಿ ಎಳೆದಾಡಿದಳು.

೫೯ ಕೆಲವು ಮಂದಿ ರಾಕ್ಷಸರು ದೇವಿಯ ತೀಕ್ಷ್ಣವಾದ ಖಡ್ಗ ಪ್ರಹಾರಗಳಿಂದ ಎರಡು ತುಂಡುಮಾಡಲ್ಪಟ್ಟವರಾಗಿ ಬಿದ್ದರು. ಮತ್ತೆ ಕೆಲವರು ಗದಾಪ್ರಹಾರದಿಂದ ಹಿಂಸಿಸಲ್ಪಟ್ಟವರಾಗಿ ಸತ್ತು ನೆಲದಲ್ಲಿ ಬಿದ್ದರು.

೬೦. ಕೆಲವರು ರಾಕ್ಷಸರು ದೇವಿಯಿಂದ ಮುಸಲಾಯುಧದಿಂದ ಮತ್ತೆ ಮತ್ತೆ ಬಡಿಯಲ್ಪಟ್ಟವರಾಗಿ ರಕ್ತವನ್ನು ವಮನ ಮಾಡಿಕೊಂಡರು. ಮತ್ತೆ ಕೆಲವರು ಶೂಲಾಯುಧದಿಂದ ಎದೆಯಲ್ಲಿ ಚುಚ್ಚಲ್ಪಟ್ಟವರಾಗಿ ನೆಲದ ಮೇಲೆ ಬಿದ್ದರು.

೬೧. ರಣರಂಗದಲ್ಲಿ ದೇವಿಯ ಬಿಡುವಿಲ್ಲದೆ ಅಖಂಡವಾಗಿ ಪ್ರಯೋಗಿಸಿದ ಬಾಣಗಳ ರಾಶಿಯಿಂದ ತುಂಡುಮಾಡಲ್ಪಟ್ಟ, ಆಕಾರದಲ್ಲಿ ಬೆಟ್ಟಗಳನ್ನು ಅಣಕಿಸುವ ದೊಡ್ಡ ರಾಕ್ಷಸರು ಪ್ರಾಣಗಳನ್ನು ತ್ಯಜಿಸಿದರು.

ಕೇಷಾಂ ಚಿದ್ಬಾಹವಶ್ಛಿನ್ನಾಶ್ಛಿನ್ನಗ್ರೀವಾಸ್ತಥಾಪರೇ ।
ಶಿರಾಂಸಿ ಪೇತುರನ್ಯೇಷಾಮನ್ಯೇ ಮಧ್ಯೇ ವಿದಾರಿತಾಃ ॥೬೨॥

ವಿಚ್ಛಿನ್ನಜಙ್ಘಾಸ್ತ್ವಪರೇ ಪೇತುರುರ್ವ್ಯಾಂ ಮಹಾಸುರಾಃ ।
ಏಕಬಾಹ್ವಕ್ಷಿಚರಣಾಃ ಕೇಚಿದ್ದೇವ್ಯಾ ದ್ವಿಧಾಕೃತಾಃ ॥೬೩॥

ಛಿನ್ನೇಽಪಿ ಚಾನ್ಯೇ ಶಿರಸಿ ಪತಿತಾಃ ಪುನರುತ್ಥಿತಾಃ ।
ಕಬನ್ಧಾ ಯುಯುಧುರ್ದೇವ್ಯಾ ಗೃಹೀತಪರಮಾಯುಧಾಃ ॥೬೪॥

ನನೃತುಶ್ಚಾಪರೇ ತತ್ರ ಯುದ್ಧೇ ತೂರ್ಯಲಯಾಶ್ರಿತಾಃ ।
ಕಬನ್ಧಾಶ್ಛಿನ್ನಶಿರಸಃ ಖಡ್ಗಶಕ್ತ್ಯೃಷ್ಟಿಪಾಣಯಃ ॥೬೫॥

---

೬೨. ಈ ಪ್ರಸಂಗದಲ್ಲಿ ಕೆಲವು ರಾಕ್ಷಸರಿಗೆ ತೋಳು ಕತ್ತರಿಸಲ್ಪಟ್ಟುವು. ಮತ್ತೆ ಕೆಲವರು ಕತ್ತರಿಸಲ್ಪಟ್ಟ ಕತ್ತು ಉಳ್ಳವರಾದರು. ಇನ್ನು ಕೆಲವರ ತಲೆಗಳು ಕೆಳಗೆ ಉರುಳಿದುವು. ಮತ್ತೆ ಕೆಲವರು ನಡುವಿನಲ್ಲಿ ತುಂಡು ಹೊಡೆಯಲ್ಪಟ್ಟರು.

೬೩. ಹಾಗು ಕೆಲವರು ಅಸುರರು ಕತ್ತರಿಸಿಹೋದ ಮೊಣಕಾಲುಗಳುಳ್ಳವರಾಗಿ ನೆಲದಮೇಲೆ ಬಿದ್ದರು. ಇನ್ನು ಕೆಲವರು ಒಂದು ತೋಳು, ಕಣ್ಣು, ಕಾಲು ಉಳಿದವರಾಗಿ ಕೆಳಗೆ ಬಿದ್ದರು. ಮತ್ತೆ ಕೆಲವರು ದೇವಿಯಿಂದ ಎರಡು ತುಂಡಾಗಿ ಕತ್ತರಿಸಲ್ಪಟ್ಟರು.

೬೪. ದೇವಿಯಿಂದ ಕತ್ತರಿಸಲ್ಪಟ್ಟ ತಲೆಯು ಕೆಳಗೆ ಉರುಳಿ ನೆಲಕ್ಕೆ ಬಿದ್ದು ಮತ್ತೆ ಮೇಲೆ ಎದ್ದ ಕೆಲವು ಕಬಂಧಗಳು ತೆಗೆದುಕೊಂಡ ಉತ್ತಮವಾದ ಆಯುಧವುಳ್ಳವರಾಗಿ ದೇವಿಯೊಡನೆ ಯುದ್ಧಮಾಡಿದುವು.

೬೫. ಮತ್ತೆ ಕೆಲವರು ದೇವಿಯಿಂದ ಕತ್ತರಿಸಲ್ಪಟ್ಟ ತಲೆಯುಳ್ಳ ಕಬಂಧಗಳಾಗಿ ಖಡ್ಗ-ಶಕ್ತಿ-ಋಷ್ಟಿ ಆಯುಧಗಳನ್ನು ಕೈಯಲ್ಲಿ ಧರಿಸಿ ಆ ಯುದ್ಧರಂಗದಲ್ಲಿ ವೀಣಾ-ವೇಣು-ಮೃದಂಗ ಮುಂತಾದ ವಾದ್ಯಗಳ ಲಯವನ್ನು ಆಶ್ರಯಿಸಿ ವೀರ ರಸಾವೇಶದಿಂದ ಕುಣಿದಾಡಿದುವು.

ತಿಷ್ಠ ತಿಷ್ಠೇತಿ ಭಾಷನ್ತೋ ದೇವೀಮನ್ಯೇ ಮಹಾಸುರಾಃ ।
ರುಧಿರೌಘವಿಲಿಪ್ತಾಙ್ಗಾಃ ಸಙ್ಗ್ರಾಮೇ ಲೋಮಹರ್ಷಣೇ ॥೬೬॥

ಪಾತಿತೈ ರಥನಾಗಾಶ್ವೈರಸುರೈಶ್ಚ ವಸುನ್ಧರಾ ।
ಅಗಮ್ಯಾ ಸಾಽಭವತ್ತತ್ರ ಯತ್ರಾಭೂತ್ಸ ಮಹಾರಣಃ ॥೬೭॥

ಶೋಣಿತೌಘಾ ಮಹಾನದ್ಯಃ ಸದ್ಯಸ್ತತ್ರ ವಿಸುಸ್ರುವುಃ ।
ಮಧ್ಯೇ ಚಾಸುರಸೈನ್ಯಸ್ಯ ವಾರಣಾಸುರವಾಜಿನಾಮ್ ॥೬೮॥

ಕ್ಷಣೇನ ತನ್ಮಹಾಸೈನ್ಯಮಸುರಾಣಾಂ ತಥಾಮ್ಬಿಕಾ ।
ನಿನ್ಯೇ ಕ್ಷಯಂ ಯಥಾ ವಹ್ನಿಸ್ತೃಣದಾರುಮಹಾಚಯಮ್ ॥೬೯॥

ಸ ಚ ಸಿಂಹೋ ಮಹಾನಾದಮುತ್ಸೃಜನ್ಧುತಕೇಸರಃ ।
ಶರೀರೇಭ್ಯೋಽಮರಾರೀಣಾಮಸೂನಿವ ವಿಚಿನ್ವತಿ ॥೭೦॥

---

೬೬. ವೀರಯೋಧರಾದ ಕೆಲವು ಮಂದಿ ರಾಕ್ಷಸರು ರಕ್ತಪ್ರವಾಹದಿಂದ ಬಳಿದ ದೇಹವುಳ್ಳವರಾಗಿ ರೋಮಾಂಚಕರವಾದ ಯುದ್ಧದಲ್ಲಿ ದೇವಿಯನ್ನು ನೋಡಿ "ನಿಲ್ಲು, ಯುದ್ಧಮಾಡು" ಎಂದು ಎದುರಿಸಿ ಹೋರಾಡಿದರು.

೬೭. ಹೀಗಿರಲು ಮಹಾ ಸಂಗ್ರಾಮವು ನಡೆದಿರುವ ಸ್ಥಳದಲ್ಲಿ ಕೆಳಕ್ಕೆ ಕೆಡುಹಿರುವ ಆನೆ-ಕುದುರೆ ಮತ್ತು ಅಸುರರ ರಾಶಿಗಳಿಂದ ಆ ಯುದ್ಧಭೂಮಿಯು ವೀರರಿಗೆ ಮುಂದೆ ನಡೆಯಲಾಗದ ಹಾಗಾಯಿತು.

೬೮. ಮತ್ತು ರಕ್ತದ ಪ್ರವಾಹಗಳಿಂದ ಕೂಡಿದ ಮಹಾನದಿಗಳು ರಾಕ್ಷಸಸೈನ್ಯದ ಆನೆ-ಕುದುರೆ-ರಾಕ್ಷಸ ಶ್ರೇಣಿಯ ಮಧ್ಯದಲ್ಲಿ ಯುದ್ಧವು ಪ್ರಾರಂಭವಾದ ಸ್ವಲ್ಪಹೊತ್ತಿನಲ್ಲಿ ಹುಟ್ಟಿ ಹರಿದುವು.

೬೯. ಹಾಗೆ ಆ ಚಂಡಿಕಾದೇವಿಯು ಅಸುರರ ಅಗಾಧವಾದ ಸೈನ್ಯವನ್ನು ಬೆಂಕಿಯು ಹುಲ್ಲು-ಸೌದೆಗಳ ದೊಡ್ಡ ರಾಶಿಯನ್ನು ಸುಟ್ಟು ನಾಶಗೊಳಿಸುವಂತೆ ಕ್ಷಣಮಾತ್ರದಲ್ಲಿ ನಾಶಮಾಡಿದಳು.

೭೦. ದೇವಿಯ ವಾಹನವಾದ ಸಿಂಹವು ಕತ್ತು-ಶಿರಗಳ ಸುತ್ತಲೂ ಇದ್ದ ಕೇಸರಗಳನ್ನು ಕೊಡವುತ್ತ ಭಾರಿಯಾಗಿ ಗರ್ಜನಮಾಡಿ ರಾಕ್ಷಸರ ದೇಹಗಳಿಂದ ಪ್ರಾಣವಾಯುಗಳನ್ನು ಹುಡುಕುವುದೋ ಎನ್ನುವಹಾಗೆ ಸಂಹರಿಸುತ್ತಿತ್ತು.

**ದೇವ್ಯಾ ಗಣೈಶ್ಚ ತೈಸ್ತತ್ರ ಕೃತಂ ಯುದ್ಧಂ ಮಹಾಸುರೈಃ ।**
**ಯಥೈನಾಂ ತುಷ್ಟುವುರ್ದೇವಾಃ ಪುಷ್ಪವೃಷ್ಟಿಮುಚೋ ದಿವಿ ॥೭೧॥**

**ಇತಿ ಶ್ರೀ ಮಾರ್ಕಣ್ಡೇಯ ಮಹಾಪುರಾಣೇ ಸಾವರ್ಣಿಕೇ ಮನ್ವನ್ತರೇ ದೇವೀಮಾಹಾತ್ಮ್ಯೇ ಏಕೋನಾಶೀತಿತಮೋಽಧ್ಯಾಯಃ**

---

೭೧. ದೇವಿಯ ನಿಶ್ವಾಸಗಳಿಂದ ಹುಟ್ಟಿದ ಗಣಗಳು ಮದಿಸಿದ ಅಸುರರ ಸಂಗಡ ಅದ್ಭುತವಾಗಿ ಯುದ್ಧ ಮಾಡಿದರು. ದೇವತೆಗಳು ಆ ಮಹಾ ಸಂಗ್ರಾಮವನ್ನು ನೋಡಿ ಆಕಾಶದಿಂದ ಪುಷ್ಪವೃಷ್ಟಿಯನ್ನು ಸುರಿಸುತ್ತ ಪ್ರೀತಿಯಿಂದ ದೇವಿಯನ್ನು ಸ್ತುತಿಸಿದರು.

ಮಾರ್ಕಂಡೇಯ ಮಹಾಪುರಾಣದಲ್ಲಿ ಎಪ್ಪತ್ತೊಂಭತ್ತನೆಯ ಅಧ್ಯಾಯವು ಮುಗಿದುದು.

|| ಓಂ ಶ್ರೀ ದುರ್ಗಾಯೈ ನಮಃ ||

# ಮಾರ್ಕಂಡೇಯ ಪುರಾಣಂ

## ಅಶೀತಿತಮೋಽಧ್ಯಾಯಃ

### (ಮಹಿಷಾಸುರವಧಃ)

**ಋಷಿರುವಾಚ :—**

**ನಿಹನ್ಯಮಾನಂ ತತ್ಸೈನ್ಯಮವಲೋಕ್ಯ ಮಹಾಸುರಃ ।**
**ಸೇನಾನೀಶ್ಚಿಕ್ಷುರಃ ಕೋಪಾದ್ಯಯೌ ಯೋದ್ಧುಮಥಾಮ್ಬಿಕಾಮ್ ||೧||**

**ಸ ದೇವೀಂ ಶರವರ್ಷೇಣ ವವರ್ಷ ಸಮರೇಽಸುರಃ ।**
**ಯಥಾ ಮೇರುಗಿರೇಃ ಶೃಙ್ಗಂ ತೋಯವರ್ಷೇಣ ತೋಯದಃ ||೨||**

---

## ಎಂಭತ್ತನೆಯ ಅಧ್ಯಾಯ

ಸುಮೇಧ ಋಷಿಯು ಹೇಳಿದನು :—

೧. ಆಗ ಮಹಿಷಾಸುರನ ಸೇನಾಪತಿಯಾದ ಚಿಕ್ಷುರನೆಂಬ ಮಹಾಸುರನು ತನ್ನ ಸೈನ್ಯವು ವಧಿಸಲ್ಪಡುತ್ತಿದ್ದುದನ್ನು ಕಂಡು ಕೋಪದಿಂದ ತಾನು ದೇವಿಯೊಡನೆ ಯುದ್ಧಮಾಡಲು ಬಂದನು.

೨. ಆ ಚಿಕ್ಷುರಾಸುರನು ನೀರುತುಂಬಿದ ಮೋಡವು ಧಾರಾಕಾರದ ಮಳೆಯಿಂದ ಮೇರುಗಿರಿಯ ಶಿಖರವನ್ನು ಮುಚ್ಚಿಹಾಕುವ ಹಾಗೆ ಸಮರಾಂಗಣದಲ್ಲಿ ಬಾಣಗಳ ಸುರಿಮಳೆಯಿಂದ ದೇವಿಯನ್ನು ಮುಚ್ಚಿಹಾಕಲು ಯತ್ನಿಸಿದನು.

ತಸ್ಯ ಛಿತ್ವಾ ತತೋ ದೇವೀ ಲೀಲಯೈವ ಶರೋತ್ಕರಾನ್ ।
ಜಘಾನ ತುರಗಾನ್ಬಾಣೈರ್ಯನ್ತಾರಂ ಚೈವ ವಾಜಿನಾಮ್ ॥೩॥

ಚಿಚ್ಛೇದ ಚ ಧನುಃ ಸದ್ಯೋ ಧ್ವಜಂ ಚಾತಿಸಮುಚ್ಛ್ರಿತಮ್ ।
ವಿವ್ಯಾಧ ಚೈನಂ ಗಾತ್ರೇಷು ಛಿನ್ನಧನ್ವಾನಮಾಶುಗೈಃ ॥೪॥

ಸ ಛಿನ್ನಧನ್ವಾ ವಿರಥೋ ಹತಾಶ್ವೋ ಹತಸಾರಥಿಃ ।
ಅಭ್ಯಧಾವತ ತಾಂ ದೇವೀಂ ಖಡ್ಗಚರ್ಮಧರೋಽಸುರಃ ॥೫॥

ಸಿಹ್ಮಮಾಹತ್ಯ ಖಡ್ಗೇನ ತೀಕ್ಷ್ಣಧಾರೇಣ ಮೂರ್ಧನಿ ।
ಆಜಘಾನ ಭುಜೇ ಸವ್ಯೇ ದೇವೀಮಪ್ಯತಿವೇಗವಾನ್ ॥೬॥

---

೩. ತರುವಾಯ ದೇವಿಯು ಚಿಕ್ಷುರಾಸುರನು ಬಿಟ್ಟ ಬಾಣರಾಶಿಯನ್ನು ಅನಾಯಾಸವಾಗಿ ಕತ್ತರಿಸಿಹಾಕಿ ಪ್ರತಿಬಾಣಗಳಿಂದ ಅವನ ಕುದುರೆಗಳನ್ನೂ, ಕುದುರೆ ರಥಗಳನ್ನು ನಡೆಸುವ ಸಾರಥಿಯನ್ನೂ ಸಂಹರಿಸಿದಳು.

೪. ಮತ್ತು ಮೇಲೆ ಮೇಲೆ ಬಾಣಗಳನ್ನು ಪ್ರಯೋಗಿಸುತ್ತ ದೇವಿಯು ಕ್ಷಣಮಾತ್ರದಲ್ಲಿ ಬಿಲ್ಲನ್ನೂ, ಅತ್ಯುನ್ನತವಾದ ಧ್ವಜವನ್ನೂ ಕತ್ತರಿಸಿದಳು. ಮತ್ತು ಕತ್ತರಿಸಲ್ಪಟ್ಟ ಬಿಲ್ಲನ್ನು ತ್ಯಜಿಸಿದ ಆ ಅಸುರನನ್ನು ಗಾತ್ರದಲ್ಲಿ ಬಾಣಗಳಿಂದ ಪ್ರಹರಿಸಿದಳು.

೫. ಹೀಗೆ ದೇವಿಯಿಂದ ಭಿನ್ನವಾದ ರಥವುಳ್ಳವನೂ, ಸಂಹರಿಸಲ್ಪಟ್ಟ ಸಾರಥಿಯುಳ್ಳವನೂ, ವಧಿಸಲ್ಪಟ್ಟ ಕುದುರೆಗಳುಳ್ಳವನೂ ಮತ್ತು ಕತ್ತರಿಸಲ್ಪಟ್ಟ ಬಿಲ್ಲುಳ್ಳವನೂ ಆದ ಅಸುರನು ಖಡ್ಗ-ಚರ್ಮಗಳನ್ನು ಧರಿಸಿ ಆ ದೇವಿಯನ್ನು ಎದುರಿಸಿ ಬಂದನು.

೬. ಅತಿಯಾದ ವೇಗದಿಂದ ಕೂಡಿದ ಸೇನಾನಿಯಾದ ಚಿಕ್ಷುರನು ತೀಕ್ಷ್ಣವಾದ ಮೊನೆಯುಳ್ಳ ಖಡ್ಗದಿಂದ ದೇವಿಯ ವಾಹನವಾದ ಸಿಂಹಕ್ಕೆ ತಲೆಯ ಮೇಲೆ ಹೊಡೆದು ಹಾಗು ದೇವಿಗೂ ಎಡಭುಜದಲ್ಲಿ ಪ್ರಹರಿಸಿದನು.

ತಸ್ಯಾಃ ಖಡ್ಗೋ ಭುಜಂ ಪ್ರಾಪ್ಯ ಪಫಾಲ ನೃಪನನ್ದನ ।
ತತೋ ಜಗ್ರಾಹ ಶೂಲಂ ಸ ಕೋಪಾದರುಣಲೋಚನಃ ॥೭॥

ಚಿಕ್ಷೇಪ ಚ ತತಸ್ತತ್ತು ಭದ್ರಕಾಲ್ಯಾಂ ಮಹಾಸುರಃ ।
ಜಾಜ್ವಲ್ಯಮಾನಂ ತೇಜೋಭೀ ರವಿಬಿಮ್ಬಮಿವಾಮ್ಬರಾತ್ ॥೮॥

ದೃಷ್ಟ್ವಾ ತದಾಪತಚ್ಛೂಲಂ ದೇವೀ ಶೂಲಮಮುಞ್ಚತ ।
ತೇನ ತಚ್ಛತಧಾ ನೀತಂ ಶೂಲಂ ಸ ಚ ಮಹಾಸುರಃ ॥೯॥

ಹತೇ ತಸ್ಮಿನ್ಮಹಾವೀರ್ಯೇ ಮಹಿಷಸ್ಯ ಚಮೂಪತೌ ।
ಆಜಗಾಮ ಗಜಾರೂಢಶ್ಚಾಮರಸ್ತ್ರಿದಶಾರ್ದನಃ ॥೧೦॥

---

೭. ರಾಜಪುತ್ರನಾದ ಸುರಥನೇ! ರಾಕ್ಷಸನ ಆ ಖಡ್ಗವು ದೇವಿಯ ಭುಜಕ್ಕೆ ತಗುಲಿ ಪುಡಿಯಾಗಿ ಹೋಯಿತು. ತರುವಾಯ ಕೋಪವೇರಿ ಕೆಂಪಾದ ಕಣ್ಣುಗಳುಳ್ಳ ಚಿಕ್ಷುರಾಸುರನು ಶೂಲವನ್ನು ತೆಗೆದುಕೊಂಡನು.

೮. ಮಹಾಸುರನಾದ ಚಿಕ್ಷುರನು ಆಕಾಶವನ್ನು ವ್ಯಾಪಿಸಿ ಜ್ವಲಿಸುವ ಸೂರ್ಯನ ಬಿಂಬದಂತೆ ತನ್ನ ತೇಜಸ್ಸುಗಳಿಂದ ಜ್ವಲಿಸುತ್ತಿದ್ದ ಆ ಶೂಲವನ್ನು ಮಂಗಳಮೂರ್ತಿಯಾದ ಚಂಡಿಕಾದೇವಿಯಲ್ಲಿ ಪ್ರಯೋಗಿಸಿದನು.

೯. ಚಂಡಿಕಾದೇವಿಯು ಅಸುರನು ಬಿಟ್ಟಿರುವ, ತನ್ನ ಬಳಿಗೆ ಬರುತ್ತಿದ್ದ ಶೂಲಾಯುಧವನ್ನು ಕಂಡು ತಾನು ಪ್ರತಿಯಾಗಿ ಶೂಲವನ್ನು ಪ್ರಯೋಗಿಸಿದಳು. ಪ್ರತಿಶೂಲದಿಂದ ರಾಕ್ಷಸನ ಶೂಲವೂ ಆ ಮಹಾಸುರನೂ ನೂರಾರು ತುಂಡುಗಳಾಗಿ ಬೀಳುವಂತಾಯಿತು.

೧೦. ಮಹಿಷಾಸುರನ ಸೇನಾನಿಯಾದ, ಮಹಾವೀರ್ಯಸಂಪನ್ನನಾದ ಚಿಕ್ಷುರಾಸುರನು ವಧಿಸಲ್ಪಡಲಾಗಿ ಚಾಮರನೆಂಬ ದೇವಕಂಟಕನಾದ ರಾಕ್ಷಸನು ಆನೆಯಮೇಲೆ ಕುಳಿತುಕೊಂಡವನಾಗಿ ಯುದ್ಧಕ್ಕೆ ಬಂದನು.

**ಸೋಽಪಿ ಶಕ್ತಿಂ ಮುಮೋಚಾಥ ದೇವ್ಯಾಸ್ತಾಮಮ್ಬಿಕಾ ದ್ರುತಮ್।**
**ಹುಙ್ಕಾರಾಭಿಹತಾಂ ಭೂಮೌ ಪಾತಯಾಮಾಸ ನಿಷ್ಪ್ರಭಾಮ್॥೧೧**

**ಭಗ್ನಾಂ ಶಕ್ತಿಂ ನಿಪತಿತಾಂ ದೃಷ್ಟ್ವಾ ಕ್ರೋಧಸಮನ್ವಿತಃ।**
**ಚಿಕ್ಷೇಪ ಚಾಮರಃ ಶೂಲಂ ಬಾಣೈಸ್ತದಪಿ ಸಾಚ್ಛಿನತ್ ॥೧೨॥**

**ತತಃ ಸಿಂಹಃ ಸಮುತ್ಪತ್ಯ ಗಜಕುಮ್ಭಾನ್ತರೇ ಸ್ಥಿತಃ।**
**ಬಾಹುಯುದ್ಧೇನ ಯುಯುಧೇ ತೇನೋಚ್ಚೈಸ್ತ್ರಿದಶಾರಿಣಾ ॥೧೩॥**

**ಯುಧ್ಯಮಾನೌ ತತಸ್ತೌ ತು ತಸ್ಮಾನ್ನಾಗಾನ್ಮಹೀಂ ಗತೌ।**
**ಯುಯುಧಾತೇಽತಿ ಸಂರಬ್ಧೌ ಪ್ರಹಾರೈರತಿದಾರುಣೈಃ ॥೧೪॥**

**ತತೋ ವೇಗಾತ್ಖಮುತ್ಪತ್ಯ ನಿಪತ್ಯ ಚ ಮೃಗಾರಿಣಾ।**
**ಕರಪ್ರಹಾರೇಣ ಚ ಶಿರಶ್ಚಾಮರಸ್ಯ ಪೃಥಕ್ಕೃತಮ್ ॥೧೫॥**

---

೧೧. ಚಾಮರಾಸುರನು ದೇವಿಯಮೇಲೆ ಶಕ್ತಿ ಆಯುಧವನ್ನು ಬಿಟ್ಟನು. ಅನಂತರದಲ್ಲಿ ಚಂಡಿಕಾದೇವಿಯು ಆ ಶಕ್ತಿ ಅಯುಧವನ್ನು ಹುಂಕಾರದಿಂದ ಅಡಗಿಸಿ ಅದರ ಪ್ರಭೆಯು ಕುಂದಿಹೋಗುವಂತೆ ಮಾಡಿ ನೆಲದಲ್ಲಿ ಕೆಡವಿದಳು.

೧೨. ತನ್ನ ಶಕ್ತ್ಯಾಯುಧವು ಭಂಗಹೊಂದಿ ಕೆಳಗೆ ಬಿದ್ದುದನ್ನು ಕಂಡು ಕೋಪಾವೇಶಗೊಂಡ ಚಾಮರಾಸುರನು ದೇವಿಯ ಮೇಲೆ ಶೂಲವನ್ನೆಸೆದನು. ದೇವಿಯು ಆ ಶೂಲವನ್ನೂ ಕತ್ತರಿಸಿದಳು.

೧೩. ತರುವಾಯ ದೇವಿಯ ವಾಹನವಾದ ಸಿಂಹವು ಎರಗಿ ಆನೆಯ ಕುಂಭಸ್ಥಳದ ನಡುವೆ ನಿಂತುಕೊಂಡು ದೇವಶತ್ರುವಾದ ಚಾಮರಾಸುರನೊಡನೆ ಕಠಿನವಾಗಿ ಬಾಹುಯುದ್ಧವನ್ನು ಮಾಡಿತು.

೧೪. ಹೀಗೆ ಬಾಹುಯುದ್ಧಮಾಡುತ್ತಿದ್ದ ಸಿಂಹವೂ ಚಾಮರಾಸುರನೂ ಆನೆಯಿಂದ ಕೆಳಗಿಳಿದು ಭೂಮಿಗೆ ಬಂದರು ಮತ್ತು ಭೂಮಿಯಲ್ಲಿ ಬಲು ಸ್ಪರ್ಧೆಯಿಂದ ಭಯಂಕರವಾದ ಪ್ರಹಾರಗಳನ್ನು ಕೊಡುತ್ತ ಯುದ್ಧ ಮಾಡಿದರು.

೧೫. ತರುವಾಯ ದೇವಿಯ ಸಿಂಹವು ಆಕಾಶಕ್ಕೆ ನೆಗೆದು ಮತ್ತೆ ರಾಕ್ಷಸನ ಮೇಲೆ ಎರಗಿಬಿದ್ದು ಕೈಯ ಹೊಡೆತದಿಂದ ಚಾಮರಾಸುರನ ತಲೆಯನ್ನು ಮುರಿದು ಬೇರೆ ಮಾಡಿತು.

**ಉದಗ್ರಶ್ಚ ರಣೇ ದೇವ್ಯಾ ಶಿಲಾವೃಕ್ಷಾದಿಭಿರ್ಹತಃ ।**
**ದನ್ತಮುಷ್ಟಿತಲೈಶ್ಚೈವ ಕರಾಲಶ್ಚ ನಿಪಾತಿತಃ ॥೧೬॥**

**ದೇವೀ ಕ್ರುದ್ಧಾ ಗದಾಪಾತೈಶ್ಚೂರ್ಣಯಾಮಾಸ ಚೋದ್ಧತಮ್ ।**
**ಬಾಷ್ಕಲಂ ಭಿನ್ದಿಪಾಲೇನ ಬಾಣೈಸ್ತಾಮ್ರಂ ತಥಾನ್ಧಕಮ್ ॥೧೭॥**

**ಉಗ್ರಾಸ್ಯಮುಗ್ರವೀರ್ಯಂ ಚ ತಥೈವ ಚ ಮಹಾಹನುಮ್ ।**
**ತ್ರಿನೇತ್ರಾ ಚ ತ್ರಿಶೂಲೇನ ಜಘಾನ ಪರಮೇಶ್ವರೀ ॥೧೮॥**

**ದುರ್ಧರಂ ದುರ್ಮುಖಂ ಚೋಭೌ ಶರೈರ್ನಿನ್ಯೇ ಯಮಕ್ಷಯಮ್ ॥೧೯॥**

೧೬. ಹಾಗು ಉದಗ್ರನೆಂಬ ಅಸುರನು ದೇವಿಯಿಂದ ರಣರಂಗದಲ್ಲಿ ಕಲ್ಲು-ಮರಗಳಿಂದ ಹತನಾದನು. ಹಾಗು ಸಿಂಹ-ಗಣಪರಿವಾರದಿಂದ ಕೂಡಿದ ದೇವಿಯಿಂದ ದಂತ-ಮುಷ್ಟಿ-ತಲಶಬ್ದ ಮುಂತಾದ ಉಪಕರಣಗಳಿಂದ ಕರಾಲನೆಂಬ ರಾಕ್ಷಸನು ಕೆಡುಹಲ್ಪಟ್ಟನು.

೧೭. ಆಗ ಕೋಪಾವೇಶದಿಂದ ಕೂಡಿದ ದೇವಿಯು ಉದ್ಧತನೆಂಬ ಮದಿಸಿದ ಅಸುರನನ್ನು ಗದಾಪ್ರಹಾರಗಳಿಂದ ಪುಡಿಮಾಡಿದಳು. ಭಿಂಡಪಾಲವೆಂಬ ಆಯುಧದಿಂದ ಬಾಷ್ಕಲನೆಂಬ ಅಸುರನನ್ನು ಕೊಂದಳು. ಮತ್ತು ತಾಮ್ರ-ಅಂಧಕ ಎಂಬ ಇಬ್ಬರು ಅಸುರರನ್ನು ಬಾಣಗಳಿಂದ ವಧಿಸಿದಳು.

೧೮. ಮತ್ತು ಮೂರು ಕಣ್ಣುಗಳಿಂದ ಶೋಭಿಸುವ ಸರ್ವೇಶ್ವರಿಯಾದ ದೇವಿಯು ತ್ರಿಶೂಲಾಯುಧದಿಂದ ಉಗ್ರಾಸ್ಯ, ಉಗ್ರವೀರ್ಯ ಮತ್ತು ಮಹಾಹನು ಎಂಬ ಹೆಸರಿಗೆ ತಕ್ಕಂತೆ ಬಲಿಷ್ಠರಾದ ಮೂರು ಮಂದಿ ಅಸುರರನ್ನು ಕೊಂದಳು.

೧೯. ಹಾಗು ದೇವಿಯು ಕತ್ತಿಯಿಂದ ಬಿಡಾಲನೆಂಬ ಅಸುರನ ಮುಂಡದಿಂದ ರುಂಡವನ್ನು ಬೇರೆಮಾಡಿದಳು. ಮತ್ತು ದುರ್ಧರ-ದುರ್ಮುಖ ಎಂಬ ಇಬ್ಬರು ರಾಕ್ಷಸರನ್ನು ದೇವಿಯು ಬಾಣಗಳಿಂದ ಮೃತ್ಯುಲೋಕಕ್ಕೆ ಕಳುಹಿಸಿದಳು.

ಕಾಲಂ ಚ ಕಾಲದಣ್ಡೇನ ಕಾಲರಾತ್ರಿರಪಾತಯತ್ ।
ಉಗ್ರದರ್ಶನಮತ್ಯುಗ್ರೈಃ ಖಡ್ಗಪಾತೈರತಾಡಯತ್ ॥೨೦॥

ಅಸಿನೈವಾಸಿಲೋಮಾನಮಚ್ಛಿನತ್ಸಾ ರಣೋತ್ಸವೇ ।
ಗಣೈಃ ಸಿಂಹೇನ ದೇವ್ಯಾ ಚ ಜಯಕ್ಷ್ವೇಡಾಕೃತೋತ್ಸವೈಃ ॥೨೧॥

ಏವಂ ಸಂಕ್ಷೀಯಮಾಣೇ ತು ಸ್ವಸೈನ್ಯೇ ಮಹಿಷಾಸುರಃ ।
ಮಾಹಿಷೇಣ ಸ್ವರೂಪೇಣ ತ್ರಾಸಯಾಮಾಸ ತಾನ್ಗಣಾನ್ ॥೨೨॥

ಕಾಂಶ್ಚಿತ್ತುಣ್ಡಪ್ರಹಾರೇಣ ಕ್ಷುರಕ್ಷೇಪೈಸ್ತಥಾಪರಾನ್ ।
ಲಾಙ್ಗೂಲತಾಡಿತಾಂಶ್ಚಾನ್ಯಾಞ್ಛೃಙ್ಗಾಭ್ಯಾಂ ಚ ವಿದಾರಿತಾನ್॥೨೩॥

---

೨೦. ಮತ್ತು ಕಾಲರಾತ್ರಿಯ ಸ್ವರೂಪಿಣಿಯಾದ ದೇವಿಯು ಕಾಲ ಎಂಬ ಅಸುರನನ್ನು ಕಾಲದಂಡವನ್ನು ಪ್ರಯೋಗಿಸಿ ವಧಿಸಿದಳು. ಹಾಗು ಉಗ್ರದರ್ಶನ ಎಂಬ ಅಸುರನನ್ನು ಬಲು ಭಯಂಕರವಾದ ಖಡ್ಗಪ್ರಹಾರಗಳಿಂದ ವಧಿಸಿದಳು.

೨೧. ಮತ್ತು ಶಕ್ತಿಗಣ-ಸಿಂಹ ಇವುಗಳ ಜಯಘೋಷ ಸಿಂಹನಾದ-ಗಳಿಂದ ಪೂರ್ಣವಾದ ರಣರಂಗದಲ್ಲಿ ಯುದ್ಧಮಹೋತ್ಸವವು ನಡೆಯುತ್ತಿರಲು ದೇವಿಯು ಕತ್ತಿಯಿಂದ ಅಸಿಲೋಮ ಎಂಬ ರಾಕ್ಷಸನನ್ನು ಕತ್ತರಿಸಿ ಬಿಸುಟಳು.

೨೨. ಈ ವಿಧವಾಗಿ ತನ್ನ ಸೈನ್ಯಸಂಪತ್ತು ಕ್ಷಯಿಸುತ್ತಿರಲು ಮಹಿಷಾ-ಸುರನು ತನ್ನ ಮಹಿಷರೂಪವನ್ನು ತೆಗೆದುಕೊಂಡು ಬಂದು ದೇವಿಯ ಪರಿವಾರ-ದಲ್ಲಿದ್ದ ಶಕ್ತಿಗಣಗಳನ್ನು ಬೆದರಿಸಿದನು.

೨೩. ಶಕ್ತಿಗಣಗಳ ತಂಡಕ್ಕೆ ನುಗ್ಗಿದ ಮಹಿಷಾಸುರನು ಕೆಲವು ಗಣಗಳನ್ನು ಮೂತಿಯ ತಿವಿತದಿಂದಲೂ, ಕೆಲವು ಗಣಗಳನ್ನು ಕಾಲುಗೊರಸುಗಳ ಏಟಿನಿಂದಲೂ, ಮತ್ತೆ ಕೆಲವು ಗಣಗಳನ್ನು ಬಾಲದ ಪ್ರಹಾರದಿಂದಲೂ ಮತ್ತು ಇನ್ನು ಕೆಲವು ಗಣಗಳನ್ನು ಕೊಂಬುಗಳನ್ನು ನಾಟುವುದರಿಂದಲೂ ವ್ಯಥೆಪಡಿ-ಸಿದನು.

ವೇಗೇನ ಕಾಂಶ್ಚಿದಪರಾನ್ನಾದೇನ ಭ್ರಮಣೇನ ಚ ।
ನಿಶ್ವಾಸಪವನೇನಾನ್ಯಾನ್ಪಾತಯಾಮಾಸ ಭೂತಲೇ ॥೨೪॥

ನಿಪಾತ್ಯ ಪ್ರಮಥಾನೀಕಮಭ್ಯಧಾವತ ಸೋಽಸುರಃ ।
ಸಿಹ್ಮಂ ಹನ್ತುಂ ಮಹಾದೇವ್ಯಾಃ ಕೋಪಂ ಚಕ್ರೇ ತತೋಽಮ್ಬಿಕಾ ॥೨೫॥

ಸೋಽಪಿ ಕೋಪಾನ್ಮಹಾವೀರ್ಯಃ ಖುರಕ್ಷುಣ್ಣಮಹೀತಲಃ ।
ಶೃಙ್ಗಾಭ್ಯಾಂ ಪರ್ವತಾನುಚ್ಚೈಶ್ಚಿಕ್ಷೇಪ ಚ ನನಾದ ಚ ॥೨೬॥

ವೇಗಭ್ರಮಣವಿಕ್ಷುಣ್ಣಾ ಮಹೀ ತಸ್ಯ ವ್ಯಶೀರ್ಯತ ।
ಲಾಙ್ಗೂಲೇನಾಹತಶ್ಚಾಬ್ಧಿಃ ಪ್ಲಾವಯಾಮಾಸ ಸರ್ವತಃ ॥೨೭॥

---

೨೪. ಹಾಗು ಮಹಿಷಾಸುರನು ಗಣಗಳಲ್ಲಿ ಕೆಲವರನ್ನು ವೇಗದಿಂದಲೂ ಕೆಲವರನ್ನು ಗರ್ಜನೆಯಿಂದಲೂ ಮತ್ತೆ ಕೆಲವರನ್ನು ಎತ್ತಿ ಸುತ್ತಿಸುವುದರಿಂದಲೂ ಮತ್ತು ಇನ್ನು ಕೆಲವರನ್ನು ಉಸಿರಿನ ಗಾಳಿಯ ವೇಗದಿಂದಲೂ ನೆಲಕ್ಕೆ ಉರುಳಿಸಿದನು.

೨೫. ಈ ವಿಧವಾಗಿ ಆ ಮಹಿಷಾಸುರನು ಪ್ರಮಥಗಣಗಳ ಸೈನ್ಯವನ್ನು ನೆಲದಲ್ಲಿ ಮಲಗಿಸಿ ಮಹಾದೇವಿಯ ವಾಹನವಾದ ಸಿಂಹವನ್ನು ಕೊಲ್ಲಲು ಓಡಿಬಂದನು. ಆಗ ಚಂಡಿಕಾದೇವಿಯು ಅಸುರನ ಮೇಲೆ ಕೋಪತಾಳಿದಳು.

೨೬. ಮಹತ್ತಾದ ವೀರ್ಯವುಳ್ಳ ಮಹಿಷಾಸುರನು ಕೂಡ ಕೋಪಾ-ವೇಶದಿಂದ ಗೊರಸುಗಳಿಂದ ಗೀರಿ ಪುಡಿಮಾಡಿದ ನೆಲವುಳ್ಳವನಾಗಿ ತನ್ನ ಕೊಂಬುಗಳಿಂದ ಪರ್ವತಗಳನ್ನು ಎತ್ತಿ ಎಸೆದನು. ಮತ್ತು ಗರ್ಜಿಸಿದನು.

೨೭. ಮಹಿಷಾಸುರನ ವೇಗದಿಂದ ಪ್ರಚಂಡವಾದ ಸುತ್ತುವಿಕೆಯಿಂದ ಪುಡಿಯಾದ ಭೂಮಿಯು ತಾನೇ ಶಿಥಿಲವಾಗುತ್ತಿತ್ತು. ಮತ್ತು ಬಾಲದಿಂದ ಅಪ್ಪಳಿಸಲ್ಪಟ್ಟ ಸಮುದ್ರವು ನೀರುಕ್ಕಿ ಬಂದು ಎಲ್ಲೆಡೆಯಲ್ಲಿಯೂ ತೋಯಿಸುತ್ತಿತ್ತು.

ಧುತಶೃಙ್ಗವಿಭಿನ್ನಾಶ್ಚ ಖಣ್ಡಂ ಖಣ್ಡಂ ಯಯುರ್ಘನಾಃ ।
ಶ್ವಾಸಾನಿಲಾಸ್ತಾಃ ಶತಶೋ ನಿಪೇತುರ್ನಭಸೋಽಚಲಾಃ ॥೨೮॥

ಇತಿ ಕ್ರೋಧಸಮಾಧ್ಮಾತಮಾಪತನ್ತಂ ಮಹಾಸುರಮ್ ।
ದೃಷ್ಟ್ವಾ ಸಾ ಚಣ್ಡಿಕಾ ಕೋಪಂ ತದ್ವಧಾಯ ತದಾಕರೋತ್ ॥೨೯॥

ಸಾ ಕ್ಷಿಪ್ತ್ವಾ ತಸ್ಯ ವೈ ಪಾಶಂ ತಂ ಬಬನ್ಧ ಮಹಾಸುರಮ್ ।
ತತ್ಯಾಜ ಮಾಹಿಷಂ ರೂಪಂ ಸೋಽಪಿ ಬದ್ಧೋ ಮಹಾಮೃಧೇ॥೩೦॥

ತತಃ ಸಿಹ್ಮೋಽಭವತ್ಸದ್ಯೋ ಯಾವತ್ತಸ್ಯಾಮ್ಬಿಕಾ ಶಿರಃ ।
ಛಿನತ್ತಿ ತಾವತ್ಪುರುಷಃ ಖಡ್ಗಪಾಣಿರದೃಶ್ಯತ ॥೩೧॥

---

೨೮. ಮತ್ತು ಆಗಾಗ ಕೊಡವಿದ ಕೊಂಬುಗಳಿಂದ ಭೇದಿಸಲ್ಪಟ್ಟ ಮೋಡಗಳು ತುಂಡು ತುಂಡಾಗಿ ಚಲಿಸಿದುವು. ಮತ್ತು ಶ್ವಾಸವಾಯುವಿನಿಂದ ಮೇಲಕ್ಕೆ ಎತ್ತಲ್ಪಟ್ಟ ಬೆಟ್ಟಗಳು ನೂರಾರು ಆಕಾಶದಿಂದ ಕೆಳಗೆ ಬಿದ್ದುವು.

೨೯. ಈ ಬಗೆಯಿಂದ ಕೋಪಾವೇಶದಿಂದ ಊದಿಕೊಂಡು ತನ್ನೆದುರು ಬರುತ್ತಲಿದ್ದ ಆ ಮಹಿಷಾಸುರನನ್ನು ನೋಡಿ ಆಗ ಚಂಡಿಕಾದೇವಿಯು ಆ ಅಸುರನನ್ನು ವಧಿಸಲು ಉಗ್ರವಾದ ಕೋಪವನ್ನು ತಾಳಿದಳು.

೩೦. ಆಗ ಚಂಡಿಕಾಂಬಿಕೆಯು ಅಸುರನ ಮೇಲೆ ಪಾಶವನ್ನು ಬೀಸಿ ಆ ಮಹಾಸುರನನ್ನು ಬಂಧಿಸಿದಳು. ಆಗ ಯುದ್ಧರಂಗದಲ್ಲಿ ಪಾಶದಿಂದ ಬಂಧಿಸಲ್ಪಟ್ಟ ಅಸುರನು ಕೂಡಲೆ ಮಹಿಷರೂಪವನ್ನು ಬಿಟ್ಟನು.

೩೧. ತರುವಾಯ ಮಹಿಷರೂಪವನ್ನು ಬಿಟ್ಟ ಅಸುರನು ಕ್ಷಣಮಾತ್ರದಲ್ಲಿ ಸಿಂಹವಾದನು. ಆಗ ಚಂಡಿಕೆಯು ಆ ಸಿಂಹದ ಶಿರವನ್ನು ಛೇದಿಸುವಷ್ಟರಲ್ಲಿ ಮತ್ತೆ ಅಸುರನು ಸಿಂಹರೂಪವನ್ನು ಬಿಟ್ಟು ಖಡ್ಗವನ್ನು ಕೈಯಲ್ಲಿ ಧರಿಸಿದ ಪುರುಷನಾಗಿ ಕಾಣಿಸಿದನು.

**ತತ ಏವಾಶು ಪುರುಷಂ ದೇವೀ ಚಿಚ್ಛೇದ ಸಾಯಕೈಃ ।**
**ತಂ ಖಡ್ಗಚರ್ಮಣಾ ಸಾರ್ಧಂ ತತಃ ಸೋಽಭೂನ್ಮಹಾಗಜಃ ॥೩೨॥**

**ಕರೇಣ ಚ ಮಹಾಸಿಹ್ಮಂ ಚಕರ್ಷ ಚ ಜಗರ್ಜ ಚ ।**
**ಕರ್ಷತಸ್ತು ಕರಂ ದೇವೀ ಖಡ್ಗೇನ ನಿರಕೃನ್ತತ ॥೩೩॥**

**ತತೋ ಮಹಾಸುರೋ ಭೂಯೋ ಮಾಹಿಷಂ ವಪುರಾಶ್ರಿತಃ ।**
**ತಥೈವ ಕ್ಷೋಭಯಾಮಾಸ ತ್ರೈಲೋಕ್ಯಂ ಸಚರಾಚರಮ್ ॥೩೪॥**

**ತತಃ ಕ್ರುದ್ಧಾ ಜಗನ್ಮಾತಾ ಚಣ್ಡಿಕಾ ಪಾನಮುತ್ತಮಮ್ ।**
**ಪಪೌ ಪುನಃ ಪುನಶ್ಚೈವ ಜಹಾಸಾರುಣಲೋಚನಾ ॥೩೫॥**

**ನನರ್ದ ಚಾಸುರಃ ಸೋಽಪಿ ಬಲವೀರ್ಯಮದೋದ್ಧತಃ ।**
**ವಿಷಾಣಾಭ್ಯಾಂ ಚ ಚಿಕ್ಷೇಪ ಚಣ್ಡಿಕಾಂ ಪ್ರತಿ ಭೂಧರಾನ್ ॥೩೬॥**

---

೩೨. ಕೂಡಲೆ ದೇವಿಯು ಖಡ್ಗವನ್ನು ಧರಿಸಿದ ಪುರುಷನನ್ನು ಅವನು ಧರಿಸಿದ ಖಡ್ಗ-ಚರ್ಮಗಳ ಜೊತೆಯಲ್ಲಿ ಬಾಣಗಳಿಂದ ಕತ್ತರಿಸಿದಳು. ಆಗ ಆ ಪುರುಷರೂಪವನ್ನು ಬಿಟ್ಟು ಅಸುರನು ದೊಡ್ಡ ಆನೆಯಾದನು.

೩೩. ಮತ್ತು ಗಜರೂಪಿಯಾದ ಅಸುರನು ತನ್ನ ಸೊಂಡಲಿನಿಂದ ಸಿಂಹವನ್ನು ಸೆಳೆದು ಗರ್ಜನಮಾಡಿದನು. ಆಗ ದೇವಿಯು ಸಿಂಹವನ್ನು ಸೆಳೆಯುತ್ತಿದ್ದ ಆನೆಯ ಸೊಂಡಿಲನ್ನು ಖಡ್ಗದಿಂದ ಕತ್ತರಿಸಿದಳು.

೩೪. ತರುವಾಯ ಮಹಾಸುರನು ಮತ್ತೆ ಮಹಿಷರೂಪವನ್ನು ಧರಿಸಿದವನಾಗಿ ಮೊದಲಿನಂತೆ ಚರ-ಅಚರ ಪ್ರಾಣಿಗಳಿಂದ ತುಂಬಿದ ಮೂರು ಲೋಕಗಳನ್ನು ಕ್ಷೋಭಗೊಳಿಸಿದನು.

೩೫. ಅನಂತರ ಜಗನ್ಮಾತೆಯಾದ ಚಂಡಿಕಾದೇವಿಯು ಕೋಪಗೊಂಡವಳೂ, ಕೆಂಪಾದ ಕಣ್ಣುಗಳುಳ್ಳವಳೂ ಆಗಿ ಮತ್ತೆ ಮತ್ತೆ ಮಧುಪಾನವನ್ನು ಮಾಡಿದಳು. ಹಾಗೆ ವೀರಪಾನವನ್ನು ಮಾಡುತ್ತ ನಕ್ಕಳು.

೩೬. ಶಕ್ತಿ-ವಿಕ್ರಮಗಳಿಂದ ಮದವೇರಿ ಕೊಬ್ಬಿರುವ ಮಹಿಷಾಸುರನು ಗರ್ಜನಮಾಡಿದನು. ಮತ್ತು ಪರ್ವತಗಳನ್ನು ಕೊಂಬುಗಳಿಂದ ಎತ್ತಿ ಮಹಾದೇವಿಯ ಮೇಲೆ ಎಸೆದನು.

ಸಾ ಚ ತಾನ್ಪ್ರಹಿತಾಂಸ್ತೇನ ಚೂರ್ಣಯನ್ತೀ ಶರೋತ್ಕರೈಃ ।
ಉವಾಚ ತಂ ಮದೋದ್ಧೂತಮುಖರಾಗಾಕುಲಾಕ್ಷರಮ್ ॥೩೭॥

ದೇವ್ಯುವಾಚ :—

ಗರ್ಜ ಗರ್ಜ ಕ್ಷಣಂ ಮೂಢ ಮಧು ಯಾವತ್ಪಿಬಾಮ್ಯಹಮ್ ।
ಮಯಾ ತ್ವಯಿ ಹತೇಽತ್ರೈವ ಗರ್ಜಿಷ್ಯನ್ತ್ಯಾಶು ದೇವತಾಃ ॥೩೮॥

ಋಷಿರುವಾಚ :—

ಏವಮುಕ್ತ್ವಾ ಸಮುತ್ಪತ್ಯ ಸಾರೂಢಾ ತಂ ಮಹಾಸುರಮ್ ।
ಪಾದೇನಾಕ್ರಮ್ಯ ಕಣ್ಠೇ ಚ ಶೂಲೇನೈನಮತಾಡಯತ್ ॥೩೯॥

ತತಃ ಸೋಽಪಿ ಪದಾಕ್ರಾನ್ತಸ್ತಯಾ ನಿಜಮುಖಾತ್ತತಃ ।
ಅರ್ಧನಿಷ್ಕ್ರಾನ್ತ ಏವಾಸೀದ್ದೇವ್ಯಾ ವೀರ್ಯೇಣ ಸಂವೃತಃ ॥೪೦॥

---

೩೭. ಆಗ ಚಂಡಿಕಾದೇವಿಯು ಮಹಿಷಾಸುರನಿಂದ ಎಸೆಯಲ್ಪಟ್ಟ ಪರ್ವತಗಳನ್ನು ತನ್ನ ಬಾಣವೃಷ್ಟಿಯಿಂದ ಪುಡಿಮಾಡುತ್ತ ಮಧುಪಾನದ ಮದದಿಂದ ಏರಿದ ಮುಖದ ಕೆಂಪುಬಣ್ಣವುಳ್ಳವಳಾಗಿ ಮದವಿಕಾರದಿಂದ ತೊದಲಿನ ಮಾತಿನಿಂದ ಮಾತನಾಡಿದಳು.

ದೇವಿಯು ಹೀಗೆಂದಳು :—

೩೮. ಎಲೈ ಮೂಢನಾದ ಅಸುರನೇ! ಒಂದು ಕ್ಷಣಕಾಲ ಮಾತ್ರ ಗರ್ಜನಮಾಡು, ಇಗೋ! ನಾನು ಇಷ್ಟರಲ್ಲಿ ಮಧುಪಾನವನ್ನು ಪೂರೈಸಿ ಬರುವೆನು. ಈಗಲೇ ನನ್ನಿಂದ ನೀನು ಹತನಾಗಿ ಬೀಳಲು ದೇವತೆಗಳು ಬೇಗ ಆನಂದದಿಂದ ಗರ್ಜಿಸುವರು.

ಋಷಿಯು ಹೀಗೆಂದನು :—

೩೯. ದೇವಿಯು ಹೀಗೆಂದು ಹೇಳಿ ಕೂಡಲೆ ಮೇಲಕ್ಕೆ ಎದ್ದು ಆ ಅಸುರನ ಮೇಲೆ ಬಿದ್ದು ತನ್ನ ಪಾದದಿಂದ ಅವನ ಕಂಠವನ್ನು ಬಿಗಿಯಾಗಿ ತುಳಿದು ನಿಂತು ಶೂಲಾಯುಧದಿಂದ ಅಸುರನನ್ನು ಚುಚ್ಚಿದಳು.

೪೦. ತರುವಾಯ ದೇವಿಯಿಂದ ಕಾಲಿನಿಂದ ತುಳಿದು ಆಕ್ರಮಿಸಲ್ಪಟ್ಟಿರುವ ಅಸುರನು ತನ್ನ ಮುಖದಿಂದ ಹೊರಕ್ಕೆ ಅರ್ಧಮಾತ್ರ ಹೊರಟುಬಂದವನಾದರೂ ದೇವಿಯ ವೀರ್ಯದಿಂದ ಅಲ್ಲಿಯೆ ಸ್ತಬ್ಧನಾದನು.

ಅರ್ಧನಿಷ್ಕ್ರಾಂತ ಏವಾಸೌ ಯುಧ್ಯಮಾನೋ ಮಹಾಸುರಃ ।
ತಯಾ ಮಹಾಸಿನಾ ದೇವ್ಯಾ ಶಿರಶ್ಛಿತ್ವಾ ನಿಪಾತಿತಃ ॥೪೧॥

ಏವಂ ಸ ಮಹಿಷೋ ನಾಮ ಸಸೈನ್ಯಃ ಸಸುಹೃದ್ಗಣಃ ।
ತ್ರೈಲೋಕ್ಯಂ ಮೋಹಯಿತ್ವಾ ತು ತಯಾ ದೇವ್ಯಾ ವಿನಾಶಿತಃ ॥೪೨॥

ತ್ರೈಲೋಕ್ಯಸ್ಥೈಸ್ತದಾ ಭೂತೈರ್ಮಹಿಷೇ ವಿನಿಪಾತಿತೇ ।
ಜಯೇತ್ಯುಕ್ತಂ ತತಃ ಸರ್ವೈಃ ಸದೇವಾಸುರಮಾನವೈಃ ॥೪೩॥

ತತೋ ಹಾಹಾಕೃತಂ ಸರ್ವಂ ದೈತ್ಯಸೈನ್ಯಂ ನನಾಶ ಯತ್ ।
ಪ್ರಹರ್ಷಂ ಚ ಪರಂ ಜಗ್ಮುಃ ಸಕಲಾ ದೇವತಾಗಣಾಃ ॥೪೪॥

---

೪೧. ಹಾಗೆ ಮಹಿಷಾಕಾರದಿಂದ ಹೊರಗೆ ಅರ್ಧಮಾತ್ರ ಹೊರಟು ಅಲ್ಲಿಯೇ ಯುದ್ಧಮಾಡುತ್ತಲಿರುವ ಆ ಮಹಾಸುರನು ದೇವಿಯಿಂದ ದೊಡ್ಡ ಕತ್ತಿಯಿಂದ ಕತ್ತರಿಸಲ್ಪಟ್ಟು ಕೆಳಗೆ ಬೀಳಿಸಲ್ಪಟ್ಟನು.

೪೨. ಈ ರೀತಿಯಾಗಿ ಆ ಮಹಿಷನೆಂಬ ಅಸುರನು ಸೈನ್ಯ-ಮಿತ್ರ-ಪರಿವಾರ ಸಮೇತನಾಗಿ ಮದದಿಂದ ತ್ರೈಲೋಕ್ಯವನ್ನು ಮೋಹಗೊಳಿಸಿ ಕಡೆಯಲ್ಲಿ ಮಹಾದೇವಿಯಿಂದ ವಧಿಸಲ್ಪಟ್ಟನು.

೪೩. ಹೀಗೆ ಮಹಾಭಯಂಕರನಾದ ಮಹಿಷಾಸುರನು ದೇವಿಯಿಂದ ವಧಿಸಲ್ಪಡಲು ದೇವ-ಅಸುರ-ಮಾನವರು ಆದಿಯಾಗಿ ಮೂರುಲೋಕಗಳಲ್ಲಿರುವ ಸಮಸ್ತ ಭೂತಗಳು ದೇವಿಯ ವಿಷಯದಲ್ಲಿ ಜಯಘೋಷಣೆಯನ್ನು ಮಾಡಿದರು.

೪೪. ತರುವಾಯ ದೈತ್ಯರ ಸೈನ್ಯವು ದೇವಿಯ ಪ್ರತಾಪದಿಂದ ಹಾಹಾಕಾರ ಮಾಡುತ್ತ ನಾಶವಾದುದರಿಂದ ಸಮಸ್ತ ದೇವತೆಗಳ ಗುಂಪುಗಳು ಅತಿಶಯವಾದ ಆನಂದವನ್ನು ಹೊಂದಿದುವು.

**ತುಷ್ಟುವುಸ್ತಾಂ ಸುರಾ ದೇವೀಂ ಸಹ ದಿವ್ಯೈರ್ಮಹರ್ಷಿಭಿಃ ।**
**ಜಗುರ್ಗನ್ಧರ್ವಪತಯೋ ನನೃತುಶ್ಚಾಪ್ಸರೋಗಣಾಃ ॥೪೫॥**

**ಇತಿ ಶ್ರೀ ಮಾರ್ಕಣ್ಡೇಯ ಮಹಾಪುರಾಣೇ ದೇವೀಮಾಹಾತ್ಮ್ಯೇ**
**ಮಹಿಷಾಸುರವಧೋ ನಾಮಾಶೀತಿತಮೋಽಧ್ಯಾಯಃ**

---

೪೫. ಆನಂದದಲ್ಲಿದ್ದ ದೇವತೆಗಳು ದೇವಲೋಕದ ಮಹರ್ಷಿಗಳೊಡನೆ ದುಷ್ಟನನ್ನು ನಿಗ್ರಹಿಸಿದ ದೇವಿಯನ್ನು ಸ್ತೋತ್ರಮಾಡಿದರು. ಗಂಧರ್ವರಾಜರು ಗಾನಮಾಡಿದರು. ಮತ್ತು ಅಪ್ಸರಾಂಗನೆಯರು ನರ್ತನಮಾಡಿದರು.

ಮಾರ್ಕಂಡೇಯ ಮಹಾಪುರಾಣದಲ್ಲಿ ಎಂಭತ್ತನೆಯ ಅಧ್ಯಾಯವು ಮುಗಿದುದು.



|| ಓಂ ಶ್ರೀ ದುರ್ಗಾಯೈ ನಮಃ ||

# ಮಾರ್ಕಂಡೇಯ ಪುರಾಣಂ



## ಏಕಾಶೀತಿತಮೋಽಧ್ಯಾಯಃ

**ಋಷಿರುವಾಚ :—**

**ತತಃ ಸುರಗಣಾಃ ಸರ್ವೇ ದೇವ್ಯಾ ಇನ್ದ್ರಪುರೋಗಮಾಃ ।**
**ಸ್ತುತಿಮಾರೇಭಿರೇ ಕರ್ತುಂ ನಿಹತೇ ಮಹಿಷಾಸುರೇ ॥೧॥**

**ಶಕ್ರಾದಯಃ ಸುರಗಣಾ ನಿಹತೇಽತಿವೀರ್ಯೇ**
**ತಸ್ಮಿನ್ ದುರಾತ್ಮನಿ ಸುರಾರಿಬಲೇ ಚ ದೇವ್ಯಾ ।**
**ತಾಂ ತುಷ್ಟುವುಃ ಪ್ರಣತಿನಮ್ರಶಿರೋಧರಾಂಸಾ ।**
**ವಾಗ್ಭಿಃ ಪ್ರಹರ್ಷಪುಲಕೋದ್ಗಮಚಾರುದೇಹಾಃ ॥೨॥**

---

## ಎಂಭತ್ತೊಂದನೆಯ ಅಧ್ಯಾಯ

ಸುಮೇಧ ಋಷಿಯು ಹೇಳಿದನು :—

೧. ತ್ರಿಲೋಕಕಂಟಕನಾದ ಮಹಿಷಾಸುರನ ವಧೆಯಾದ ಮೇಲೆ ಇಂದ್ರನು ಮೊದಲಾಗಿ ಸಮಸ್ತ ದೇವತೆಗಳು ಚಂಡಿಕಾದೇವಿಯನ್ನು ಸ್ತೋತ್ರಮಾಡಲು ಉಪಕ್ರಮಿಸಿದರು.

೨. ಅತಿಯಾದ ವೀರ್ಯವುಳ್ಳವನೂ ನೀಚಾತ್ಮನೂ ಆದ ಮಹಿಷಾಸುರನೂ ಮತ್ತು ರಾಕ್ಷಸರ ಸೈನ್ಯವೂ ಚಂಡಿಕಾಂಬಿಕೆಯಿಂದ ಸಂಹರಿಸಲ್ಪಟ್ಟಿರಲು ಇಂದ್ರನು ಮೊದಲಾದ ಸಮಸ್ತ ದೇವಗಣಗಳು ಪ್ರಣಾಮಮಾಡಿ ಬಗ್ಗಿರುವ ಕತ್ತು ಮತ್ತು ಹೆಗಲುಗಳುಳ್ಳವರೂ, ಹರ್ಷದಿಂದ ಉಂಟಾದ ರೋಮಾಂಚದಿಂದ ಸುಂದರ ದೇಹವುಳ್ಳವರೂ ಆಗಿ ಸ್ತುತಿವಚನಗಳಿಂದ ದೇವಿಯನ್ನು ಸ್ತುತಿಮಾಡಿದರು.

ದೇವಾ ಊಚುಃ :—

ದೇವ್ಯಾ ಯಯಾ ಜಗದಿದಂ ತತಮಾತ್ಮಶಕ್ತ್ಯಾ
ನಿಶ್ಶೇಷದೇವಗಣಶಕ್ತಿಸಮೂಹಮೂರ್ತ್ಯಾ ।
ತಾಮಮ್ಬಿಕಾಮಖಿಲದೇವಮಹರ್ಷಿಪೂಜ್ಯಾಂ
ಭಕ್ತ್ಯಾ ನತಾಃ ಸ್ಮ ವಿದಧಾತು ಶುಭಾನಿ ಸಾ ನಃ ॥೩॥

ಯಸ್ಯಾಃ ಪ್ರಭಾವಮತುಲಂ ಭಗವಾನನನ್ತೋ
ಬ್ರಹ್ಮಾ ಹರಶ್ಚ ನ ಹಿ ವಕ್ತುಮಲಂ ಬಲಂ ಚ ।
ಸಾ ಚಣ್ಡಿಕಾಖಿಲಜಗತ್ಪರಿಪಾಲನಾಯ
ನಾಶಾಯ ಚಾಶುಭಭಯಸ್ಯ ಮತಿಂ ಕರೋತು ॥೪॥

ಯಾ ಶ್ರೀಃ ಸ್ವಯಂ ಸುಕೃತಿನಾಂ ಭವನೇಷ್ವಲಕ್ಷ್ಮೀಃ
ಪಾಪಾತ್ಮನಾಂ ಕೃತಧಿಯಾಂ ಹೃದಯೇಷು ಬುದ್ಧಿಃ ।

---

ದೇವತೆಗಳು ಹೀಗೆ ಸ್ತುತಿಸಿದರು :—

೩. ಸಮಸ್ತ ದೇವತೆಗಳ ಗುಂಪಿನ ಶಕ್ತಿಗಳ ಸಮೂಹದ ಸಮಷ್ಟಿ-ಮೂರ್ತಿಯಾದ ಯಾವ ದೇವಿಯಿಂದ ಆತ್ಮಶಕ್ತಿಯಿಂದ ಎಲ್ಲ ವಿಶ್ವವು ವ್ಯಾಪಿಸಲ್ಪಟ್ಟಿರುವುದೊ, ಸಕಲ ದೇವತೆ-ಮಹರ್ಷಿಗಳಿಂದ ಪೂಜ್ಯಳಾದ ಆ ಅಂಬಿಕೆಯನ್ನು ಭಕ್ತಿಯಿಂದ ನಮಸ್ಕಾರಮಾಡುವೆವು. ಆ ಅಂಬಿಕೆಯು ನಮಗೆ ಕಲ್ಯಾಣವನ್ನು ಕೊಡಲಿ.

೪. ಯಾವ ಚಂಡಿಕಾದೇವಿಯ ನಿರುಪಮವಾದ ಪ್ರಭಾವ-ವಿಕ್ರಮಗಳನ್ನು ಅಖಂಡೈಶ್ವರ್ಯಗಳಿಂದ ಕೂಡಿದ ಬ್ರಹ್ಮ-ವಿಷ್ಣು-ಶಂಕರರೆಂಬ ತ್ರಿಮೂರ್ತಿಗಳು ವರ್ಣಿಸಲು ಅಶಕ್ತರಾಗಿರುವರೊ ಅಂತಹ ಚಂಡಿಕೆಯು ಸಮಸ್ತ ಜಗತ್ತನ್ನು ಪಾಲಿಸುವುದಕ್ಕೂ ಮತ್ತು ಅಶುಭದ ಭಯವನ್ನು ನೀಗಿಸುವುದಕ್ಕೂ ಸಂಕಲ್ಪವನ್ನು ಮಾಡಲಿ.

೫. ದೇವಿಯೇ! ನೀನು ಪುಣ್ಯವಂತರ ಮನೆಯಲ್ಲಿ ಲಕ್ಷ್ಮಿರೂಪಳಾಗಿದ್ದೀಯೆ. ಪಾಪಶೀಲರ ಮನೆಯಲ್ಲಿ ಅಲಕ್ಷ್ಮಿಯಾಗಿದ್ದೀಯೆ, ಪ್ರಜ್ಞಾವಂತರ ಹೃದಯಗಳಲ್ಲಿ ಬುದ್ಧಿರೂಪದಿಂದಿದ್ದೀಯೆ, ಸಾಧುಗಳಲ್ಲಿ ಶ್ರದ್ಧಾರೂಪಳಾ-

ಶ್ರದ್ಧಾ ಸತಾಂ ಕುಲಜನಪ್ರಭವಸ್ಯ ಲಜ್ಜಾ
ತಾಂ ತ್ವಾ ನತಾಃ ಸ್ಮ ಪರಿಪಾಲಯ ದೇವಿ ವಿಶ್ವಮ್ ॥೫॥

ಕಿಂ ವರ್ಣಯಾಮ ತವ ರೂಪಮಚಿನ್ತ್ಯಮೇತ-
ತ್ಕಿಞ್ಚಾತಿವೀರ್ಯಮಸುರಕ್ಷಯಕಾರಿ ಭೂರಿ ।
ಕಿಂ ಚಾಹವೇಷು ಚರಿತಾನಿ ತವಾದ್ಭುತಾನಿ
ಸರ್ವೇಷು ದೇವ್ಯಸುರದೇವಗಣಾದಿಕೇಷು ॥೬॥

ಹೇತುಃ ಸಮಸ್ತಜಗತಾಂ ತ್ರಿಗುಣಾಪಿ ದೇವ್ಯೈ.
ರ್ನ ಜ್ಞಾಯಸೇ ಹರಿಹರಾದಿಭಿರಪ್ಯಪಾರಾ ।
ಸರ್ವಾಶ್ರಯಾಖಿಲಮಿದಂ ಜಗದಂಶಭೂತ-
ಮವ್ಯಾಕೃತಾ ಹಿ ಪರಮಾ ಪ್ರಕೃತಿಸ್ತ್ವಮಾದ್ಯಾ ॥೭॥

---

ಗಿದ್ದೀಯೆ. ಮತ್ತು ಸತ್ಕುಲಪ್ರಸೂತರಾದವರಲ್ಲಿ ಲಜ್ಜಾರೂಪಳಾಗಿದ್ದೀಯೆ, ಅಂತಹ ನಿನ್ನನ್ನು ನಾವು ವಂದಿಸುವೆವು. ಕರುಣೆಯಿಂದ ವಿಶ್ವವನ್ನು ರಕ್ಷಿಸು.

೬. ಮಹಾದೇವಿಯೇ! ಅಸುರ-ದೇವ-ಶಕ್ತಿಗಣ ಮುಂತಾದ ಸಮಸ್ತ ವ್ಯಕ್ತಿಗಳಲ್ಲಿಯೂ ಅದ್ಭುತವನ್ನುಂಟುಮಾಡುವ ನಿನ್ನ ಚರಿತ್ರಗಳನ್ನೂ ಮತ್ತು ಮನಸ್ಸಿನಿಂದ ಚಿಂತಿಸಲಾಗದಿರುವ ಅತಿವೀರ್ಯದಿಂದ ಕೂಡಿದ, ಹಾಗು ಹೆಚ್ಚಾಗಿ ಅಸುರರನ್ನು ಸಂಹಾರಮಾಡಿದ ಯುದ್ಧರಂಗದಲ್ಲಿ ಕಾಣಿಸಿದ, ನಿನ್ನ ರೂಪವನ್ನೂ ನಾವು ಹೇಗೆ ವರ್ಣಿಸೋಣ.

೭. ದೇವಿಯೇ! ಸತ್ತ್ವ-ರಜಸ್ಸು-ತಮಸ್ಸುಗಳೆಂಬ ಗುಣತ್ರಯದ ಉಪಾಧಿಯಿಂದ ಸ್ವೀಕರಿಸಿದ ಮೂರ್ತಿತ್ರಯದಿಂದ ಸೃಷ್ಟಿ-ಸ್ಥಿತಿ-ಸಂಹಾರಗಳನ್ನು ಮಾಡುವ ನೀನು ಜಗತ್ತಿಗೆ ಕಾರಣಳಾಗಿದ್ದೀಯೆ, ಅನಂತಳಾದ ನೀನು ಹರಿ-ಹರ-ಬ್ರಹ್ಮದೇವರಿಂದಲೂ ತಿಳಿಯಲಾಗದಂತೆ ಇರುತ್ತೀಯೆ, ನೀನು ಸರ್ವಕ್ಕೂ ಆಶ್ರಯಳಾಗಿದ್ದೀಯೆ. ಮತ್ತು ವಾಙ್ಮಾನಸಗಳಿಗೆ ಅಗೋಚರಳೂ ಅನಾದಿಯಾದ ಪರಮಪ್ರಕೃತಿಸ್ವರೂಪಳೂ ಮತ್ತು ಪರಬ್ರಹ್ಮಸ್ವರೂಪಿಣಿಯೂ ಆಗಿದ್ದೀಯೆ. ಈ ಸಕಲ ಪ್ರಪಂಚವು ನಿನ್ನ ಅಂಶವಾಗಿರುವುದು.

ಯಸ್ಯಾಃ ಸಮಸ್ತಸುರತಾಃ ಸಮುದೀರಣೇನ
ತೃಪ್ತಿಂ ಪ್ರಯಾನ್ತಿ ಸಕಲೇಷು ಮಖೇಷು ದೇವೀ ।
ಸ್ವಾಹಾಸಿ ವೈ ಪಿತೃಗಣಸ್ಯ ಚ ತೃಪ್ತಿಹೇತು-
ರುಚ್ಚಾರ್ಯಸೇ ತ್ವಮತ ಏವ ಜನೈಃ ಸ್ವಧಾ ಚ ॥೮॥

ಯಾ ಮುಕ್ತಿಹೇತುರವಿಚಿನ್ತ್ಯಮಹಾವ್ರತಾ ತ್ವ-
ಮಭ್ಯಸ್ಯಸೇ ಸುನಿಯತೇನ್ದ್ರಿಯತತ್ತ್ವಸಾರೈಃ ।
ಮೋಕ್ಷಾರ್ಥಿಭಿರ್ಮುನಿಭಿರಸ್ತಸಮಸ್ತದೋಷೈ-
ರ್ವಿದ್ಯಾಸಿ ಸಾ ಭಗವತೀ ಪರಮಾ ಹಿ ದೇವಿ ॥೯॥

ಶಬ್ದಾತ್ಮಿಕಾ ಸುವಿಮಲರ್ಗ್ಯಜುಷಾಂ ನಿಧಾನ-
ಮುದ್ಗೀಥರಮ್ಯಪದಪಾಠವತಾಂ ಚ ಸಾಮ್ನಾಮ್ ।

---

೮. ಸಮಸ್ತ ದೇವತೆಗಳು ಯಾವ ಸ್ವಾಹಾದೇವಿಯ ಶಬ್ದ ಕೀರ್ತನದಿಂದ ಸಕಲ ಯಜ್ಞಗಳಲ್ಲಿ ಹವಿಸ್ಸನ್ನು ಭುಂಜಿಸಿ ತೃಪ್ತಿಯನ್ನು ಹೊಂದುವರೋ ಅಂತಹ ಸ್ವಾಹಾದೇವಿಯು ನೀನೇ ಆಗಿದ್ದೀಯೆ. ಮತ್ತು ಜನರಿಂದ ಪಿತೃಗಳಿಗೆ ಶ್ರಾದ್ಧಾನ್ನವನ್ನು ಕೊಡುವ ಸಮಯದಲ್ಲಿ ಉಚ್ಚರಿಸಲ್ಪಡುವ ಸ್ವಧಾಶಬ್ದದಿಂದ ಬೋಧಿಸಲ್ಪಡುವ ಪಿತೃದೇವತಾಗಣಕ್ಕೆ ತೃಪ್ತಿಯನ್ನು ಕೊಡಲು ಕಾರಣಳಾದ ಸ್ವಧಾದೇವಿಯು ನೀನೇ ಆಗಿದ್ದೀಯೆ.

೯. ದೃಢವಾಗಿ ನಿಗ್ರಹಿಸಿದ ಇಂದ್ರಿಯವುಳ್ಳವರೂ, ಪರಮಾರ್ಥ-ತತ್ತ್ವದಲ್ಲಿ ಅತ್ಯಾದರವುಳ್ಳವರೂ, ತ್ಯಜಿಸಿದ ರಾಗ-ದ್ವೇಷ ಮುಂತಾದ ಸಕಲ ದೋಷವುಳ್ಳವರೂ ಮತ್ತು ಮೋಕ್ಷಾರ್ಥಿಗಳೂ ಆದ ಮುನಿಗಳು ಮುಕ್ತಿಗೆ ಕಾರಣವಾಗಿ ಚಿಂತಿಸಲು ಕ್ಲೇಶಕರವಾದ ಉಪವಾಸಾದಿವ್ರತಗಳುಳ್ಳ ಸರ್ವೋತ್ತಮ ಬ್ರಹ್ಮವಿದ್ಯೆಯನ್ನು ಅಭ್ಯಾಸಮಾಡುವರು. ಸಕಲ ಸಿದ್ಧಿಯನ್ನು ಕೊಡುವ ನೀನು ಬ್ರಹ್ಮವಿದ್ಯಾಸ್ವರೂಪಳಾಗಿದ್ದೀಯೆ.

೧೦. ದೇವಿಯೇ! ಓಂಕಾರ, ರಮ್ಯವಾದ ಪದಪಾಠಗಳಿಂದ ಕೂಡಿರುವ ನಿರ್ಮಲವಾದ ಋಙ್ಮಂತ್ರ ಯಜುರ್ವೇದ ಮತ್ತು ಸಾಮಮಂತ್ರಗಳಿಗೆ ಶಬ್ದ-ಸ್ವರೂಪಳಾದ ನೀನು ನಿಧಿಯಾಗಿದ್ದೀಯೆ, ಸಮಸ್ತ ಜಗತ್ತಿನ ಪೀಡೆಯನ್ನು

ದೇವಿ ತ್ರಯೀ ಭಗವತೀ ಭವಭಾವನಾಯ
ವಾರ್ತಾಸಿ ಸರ್ವಜಗತಾಂ ಪರಮಾರ್ತಿಹನ್ತ್ರೀ ॥೧೦॥

ಮೇಧಾಸಿ ದೇವಿ ವಿದಿತಾಖಿಲಶಾಸ್ತ್ರಸಾರಾ
ದುರ್ಗಾಸಿ ದುರ್ಗಭವಸಾಗರನೌರಸಙ್ಗಾ ।
ಶ್ರೀಃ ಕೈಟಭಾರಿಹೃದಯೈಕಕೃತಾಧಿವಾಸಾ
ಗೌರೀ ತ್ವಮೇವ ಶಶಿಮೌಳಿಕೃತಪ್ರತಿಷ್ಠಾ ॥೧೧॥

ಈಷತ್ಸಹಾಸಮಮಲಂ ಪರಿಪೂರ್ಣಚನ್ದ್ರ
ಬಿಮ್ಬಾನುಕಾರಿ ಕನಕೋತ್ತಮಕಾನ್ತಿಕಾನ್ತಮ್ ।
ಅತ್ಯದ್ಭುತಂ ಪ್ರಹೃತಮಾತ್ತರುಷಾ ತಥಾಪಿ
ವಕ್ತ್ರಂ ವಿಲೋಕ್ಯ ಸಹಸಾ ಮಹಿಷಾಸುರೇಣ ॥೧೨॥

---

ಪರಿಹರಿಸುವುದೂ, ಜಗತ್ತಿನ ಯೋಗಕ್ಷೇಮಗಳಿಗೆ ಸಾಧನವಾದ ವಾರ್ತಾ (ಕೃಷಿ-ವಾಣಿಜ್ಯ) ವಿದ್ಯೆಯನ್ನು ಬೋಧಿಸುವುದೂ ಆದ ಪೂಜ್ಯವಾದ ವೇದ-ವಿದ್ಯೆಯು ನೀನೇ ಆಗಿದ್ದೀಯೆ.

೧೧. ಮಹಾದೇವಿಯೇ! ತಿಳಿಯಲ್ಪಟ್ಟಿರುವ ಸಮಸ್ತ ಶಾಸ್ತ್ರಾರ್ಥ-ತತ್ತ್ವಗಳ ಸಾರವುಳ್ಳವಳಾದ ಮೇಧಾದೇವಿಯು ನೀನೇ ಆಗಿದ್ದೀಯೆ. ದುರ್ಗವಾದ ಸಂಸಾರ ಸಮುದ್ರವನ್ನು ದಾಟಿಸುವ ನಿರಪಾಯವಾದ ನೌಕೆಯಂತಿರುವ ದುರ್ಗಾದೇವಿಯು ನೀನೇ ಆಗಿದ್ದೀಯೆ. ಕೈಟಭಾಸುರನನ್ನು ವಧಿಸಿದ ಮಹಾ-ವಿಷ್ಣುವಿನ ಹೃದಯದಲ್ಲಿ ವಾಸಮಾಡಿರುವ ಮಹಾಲಕ್ಷ್ಮಿಯು ನೀನೇ ಆಗಿದ್ದೀಯೆ. ಮತ್ತು ಚಂದ್ರಶೇಖರನಲ್ಲಿ ನೆಲೆಸಿದ ಗೌರಿಯು ನೀನೇ ಆಗಿದ್ದೀಯೆ.

೧೨. ದೇವಿಯೇ! ಮಂದಹಾಸದಿಂದ ಕೂಡಿರುವುದೂ, ನಿರ್ಮಲವೂ, ಸಂಪೂರ್ಣಕಲೆಗಳಿಂದ ತುಂಬಿರಾಜಿಸುವ ಪೂರ್ಣಚಂದ್ರನ ಬಿಂಬವನ್ನು ಅನು-ಕರಿಸುವುದೂ, ಚಿನ್ನದಂತೆ ಉತ್ತಮ ಕಾಂತಿಯುಳ್ಳದ್ದೂ ಆದ ನಿನ್ನ ಮುಖವು ಸುಂದರವಾಗಿರುವುದು. ಆದರೆ ಇಂತಹ ಮುಖವನ್ನು ನೋಡಿ ಅನಿರೀಕ್ಷಿತವಾಗಿ ಕೋಪಗೊಂಡ ಮಹಿಷಾಸುರನಿಂದ ಪ್ರಹರಿಸಲ್ಪಟ್ಟಿತು. ಜಗನ್ಮೋಹನವಾದ ಮುಖವನ್ನು ನೋಡಿ ಅಸುರನಿಗೆ ಕೋಪವುಂಟಾದುದು ಅದ್ಭುತವು.

ದೃಷ್ಟ್ವಾ ತು ದೇವಿ ಕುಪಿತಂ ಭ್ರುಕುಟೀಕರಾಲ-
ಮುದ್ಯಚ್ಛಶಾಙ್ಕಸದೃಶಚ್ಛವಿ ಯನ್ನ ಸದ್ಯಃ ।
ಪ್ರಾಣಾನ್ಮುಮೋಚ ಮಹಿಷಸ್ತದತೀವ ಚಿತ್ರಂ
ಕೈರ್ಜೀವ್ಯತೇ ಹಿ ಕುಪಿತಾನ್ತಕದರ್ಶನೇನ ॥೧೩॥

ದೇವಿ ಪ್ರಸೀದ ಪರಮಾ ಭವತೀ ಭವಾಯ
ಸದ್ಯೋ ವಿನಾಶಯತಿ ಕೋಪವತೀ ಕುಲಾನಿ ।
ವಿಜ್ಞಾತಮೇತದಧುನೈವ ಯದಸ್ತಮೇತ-
ನ್ನೀತಂ ಬಲಂ ಸುವಿಪುಲಂ ಮಹಿಷಾಸುರಸ್ಯ ॥೧೪॥

ತೇ ಸಮ್ಮತಾ ಜನಪದೇಷು ಧನಾನಿ ತೇಷಾಂ
ತೇಷಾಂ ಯಶಾಂಸಿ ನ ಚ ಸೀದತಿ ಬನ್ಧುವರ್ಗಃ ।

---

೧೩. ಮಹಾದೇವಿಯೆ! ಆಗ ಕೋಪಗೊಂಡಿರುವುದೂ, ಗಂಟಿಕ್ಕಿದ ಹುಬ್ಬುಗಳ ವಕ್ರತೆಯಿಂದ ಭಯಂಕರವೂ ಮತ್ತು ಉದಯಿಸುತ್ತಿದ್ದ ಚಂದ್ರ-ಮಂಡಲದಂತೆ ಕೆಂಪುಕಾಂತಿಯುಳ್ಳದ್ದೂ ಆದ ನಿನ್ನ ಮುಖವನ್ನು ನೋಡಿ ಮಹಿಷಾಸುರನು ಪ್ರಾಣವನ್ನು ತ್ಯಜಿಸದಿರುವುದು ತುಂಬ ಆಶ್ಚರ್ಯವು. ಕೋಪ-ಗೊಂಡ ಅಂತಕನನ್ನು ನೋಡಿ ಬದುಕುವವರು ಯಾರಿರುವರು ?

೧೪. ಜಗನ್ಮಾತೆಯೆ ! ಪ್ರಸನ್ನಳಾಗು. ನೀನು ಭಕ್ತರಿಗೆ ಐಶ್ವರ್ಯವನ್ನು ಕೊಡುವ ಮಹಾಲಕ್ಷ್ಮಿಯಾಗಿದ್ದೀಯೆ. ಹಾಗು ಕೋಪವುಳ್ಳವಳಾದರೆ ದುಷ್ಟ-ಜನರ ವಂಶವನ್ನು ನಾಶಮಾಡುತ್ತೀಯೆ! ಈ ನಿನ್ನ ಕೋಪದಫಲವು ಈಗಲೆ ಪ್ರತ್ಯಕ್ಷವಾಗಿ ಕಂಡಿರುವುದು. ಮಹಿಷಾಸುರನ ಅಪಾರವಾದ ಸೈನ್ಯವು ನಿನ್ನಿಂದ ಕ್ಷಯಗೊಳಿಸಲ್ಪಟ್ಟಿರುವುದು.

೧೫. ದೇವಿಯೆ! ನೀನು ಯಾರವಿಷಯದಲ್ಲಿ ಪ್ರಸನ್ನಳಾಗಿ ಅಭ್ಯುದಯ-ವನ್ನು ಕೊಡಲು ಬದ್ಧಕಂಕಣಳಾಗಿರುವೆಯೋ ಅವರು ನಾನಾವಿಧವಾದ ಶ್ರೇಯಸ್ಸಿಗೆ ಭಾಗಿಗಳಾಗುವರು. ಅಂತಹವರು ದೇಶದ ಮೆಚ್ಚಿಗೆಗೆ ಪಾತ್ರರಾಗು-

ಧನ್ಯಾಸ್ತ ಏವ ನಿಭೃತಾತ್ಮಜಭೃತ್ಯದಾರಾ
ಯೇಷಾಂ ಸದಾಭ್ಯುದಯಾ ಭವತೀ ಪ್ರಸನ್ನಾ ||೧೫||

ಧರ್ಮ್ಯಾಣಿ ದೇವಿ ಸಕಲಾನಿ ಸದೈವ ಕರ್ಮಾಣ್ಯ-
ತ್ಯಾದೃತಃ ಪ್ರತಿದಿನಂ ಸುಕೃತೀ ಕರೋತಿ ।
ಸ್ವರ್ಗಂ ಪ್ರಯಾತಿ ಚ ತತೋ ಭವತೀಪ್ರಸಾದಾ-
ಲ್ಲೋಕತ್ರಯೇಽಪಿ ಫಲದಾ ನನು ದೇವಿ ತೇನ ||೧೬||

ದುರ್ಗೇ ಸ್ಮೃತಾ ಹರಸಿ ಭೀತಿಮಶೇಷಜನ್ತೋಃ
ಸ್ವಸ್ಥೈಃ ಸ್ಮೃತಾಮತಿಮತೀವ ಶುಭಾಂ ದದಾಸಿ ।
ದಾರಿದ್ರ್ಯದುಃಖಭಯಹಾರಿಣಿ ಕಾ ತ್ವದನ್ಯಾ
ಸರ್ವೋಪಕಾರಕರಣಾಯ ಸದಾರ್ದ್ರಚಿತ್ತಾ ||೧೭||

---

ವರು. ಅವರು ಧನವಂತರಾಗುವರು. ಅವರು ಕೀರ್ತಿಶಾಲಿಗಳಾಗುವರು. ಅವರ ಬಂಧುವರ್ಗವು ಕಷ್ಟಕ್ಕೆ ಗುರಿಯಾಗುವುದಿಲ್ಲ ಮತ್ತು ಧನ್ಯರಾದ ಮಹಾತ್ಮರು ವಿನಯವಂತರಾದ ಪತ್ನಿ-ಪುತ್ರ-ಭೃತ್ಯ ಮುಂತಾದ ಪರಿವಾರವುಳ್ಳವರಾಗುವರು.

೧೬. ದೇವಿಯೆ! ನಿನ್ನ ಅನುಗ್ರಹಕ್ಕೆ ಪಾತ್ರನಾದ ಪುಣ್ಯವಂತನು ಧಾರ್ಮಿಕವಾದ ಸಕಲ ಕರ್ಮಗಳನ್ನು ಅಧಿಕವಾದ ಶ್ರದ್ಧಾ-ಆದರಗಳಿಂದ ಕೂಡಿದನಾಗಿ ಪ್ರತಿದಿನವೂ, ನಿರಂತರವಾಗಿ ಮಾಡುತ್ತಿರುವನು ಮತ್ತು ಅದರ ಪರಿಣಾಮವಾಗಿ ಸ್ವರ್ಗ ಸದ್ಗತಿಯನ್ನು ಅನುಭವಿಸುವನು. ಆದುದರಿಂದ ಮೂರು-ಲೋಕಗಳಲ್ಲಿ ನಾನಾವಿಧವಾದ ಇಷ್ಟಫಲಗಳನ್ನು ಕೊಡುವವಳು ನೀನೇ ಆಗಿದ್ದೀಯೆ. ನೀನು ಸತ್ಕರ್ಮಗಳನ್ನು ಮಾಡಿಸಿ ಫಲವನ್ನು ನೀಡುತ್ತೀಯೆ.

೧೭. ದುರ್ಗಾದೇವಿಯೇ! ಕಷ್ಟಸಮಯದಲ್ಲಿ ಸ್ಮರಿಸಲ್ಪಟ್ಟವಳಾಗಿ ಸಮಸ್ತ ಜಂತುವಿಗೆ ಉಂಟಾದ ಭೀತಿಯನ್ನು ನಿವಾರಣಮಾಡುತ್ತೀಯೆ. ಶಾಂತಿ-ಸಮಯದಲ್ಲಿ ಸ್ಮರಿಸಲ್ಪಟ್ಟವಳಾಗಿ ಅತ್ಯಂತ ಶ್ರೇಯಸ್ಕರವಾದ ವಿವೇಕವನ್ನು ಕೊಡುತ್ತೀಯೆ. ದಾರಿದ್ರ್ಯದುಃಖ-ಭಯಗಳನ್ನು ಪರಿಹರಿಸುವ ದೇವಿಯೇ! ಸಮಸ್ತ ಉಪಕಾರಗಳನ್ನು ಮಾಡಲು ಯಾವಾಗಲೂ ದಯಾರ್ದ್ರವಾದ ಹೃದಯ-ವುಳ್ಳವಳು ನಿನ್ನನ್ನು ಬಿಟ್ಟು ಮತ್ತಾರು ಇರುವರು?

ಏಭಿರ್ಹತೈರ್ಜಗದುಪೈತಿ ಸುಖಂ ತಥೈತೇ
ಕುರ್ವನ್ತು ನಾಮ ನರಕಾಯ ಚಿರಾಯ ಪಾಪಮ್ ।
ಸಂಗ್ರಾಮಮೃತ್ಯುಮಧಿಗಮ್ಯ ದಿವಂ ಪ್ರಯಾನ್ತು
ಮತ್ವೇತಿ ನೂನಮಹಿತಾನ್ವಿನಿಹಂಸಿ ದೇವಿ ॥೧೮॥

ದೃಷ್ಟ್ವೈವ ಕಿಂ ನ ಭವತೀ ಪ್ರಕರೋತಿ ಭಸ್ಮ
ಸರ್ವಾಸುರಾನರಿಷು ಯತ್ಪ್ರಹಿಣೋಷಿ ಶಸ್ತ್ರಮ್ ।
ಲೋಕಾನ್ಪ್ರಯಾನ್ತು ರಿಪವೋಽಪಿ ಹಿ ಶಸ್ತ್ರಪೂತಾ
ಇತ್ಥಂ ಮತಿರ್ಭವತಿ ತೇಷ್ವಹಿತೇಷು ಸಾಧ್ವೀ ॥೧೯॥

ಖಡ್ಗಪ್ರಭಾನಿಕರವಿಸ್ಫುರಣೈಸ್ತಥೋಗ್ರೈಃ
ಶೂಲಾಗ್ರಕಾನ್ತಿನಿವಹೇನ ದೃಶೋಽಸುರಾಣಾಮ್ ।

---

೧೮. ದೇವಿಯೇ ! ಲೋಕಕಂಟಕರಾದ ಅಸುರರು ಹತರಾದುದರಿಂದ ಜಗತ್ತು ಸುಖಮಯವಾಗಿರುವುದು. ಈ ಮಹಿಷಾಸುರನು ಮುಂತಾದವರು ನರಕವನ್ನು ಕೊಡುವ ಪಾಪಕರ್ಮವನ್ನು ದೀರ್ಘಕಾಲ ಮಾಡಿರಲಿ. ಆದರೆ ಅಂತಹ ದುಷ್ಟರು ಸಂಗ್ರಾಮದಲ್ಲಿ ಮರಣವನ್ನು ಹೊಂದಿ ಸ್ವರ್ಗಸುಖವನ್ನು ಹೊಂದಲಿ ಎಂದು ಭಾವಿಸಿ ನೀನು ನಿಷ್ಕರುಣೆಯಂತೆ ವರ್ತಿಸಿ ಶತ್ರುಗಳನ್ನು ಸಂಹಾರಮಾಡುತ್ತೀಯೆ. ಇದು ನಿನ್ನ ಶತ್ರುಜನರಲ್ಲಿ ನೀನು ಮಾಡುವ ಉಪಕಾರವು.

೧೯. ದೇವಿಯೆ! ನಿನ್ನ ಚಂಡದೃಷ್ಟಿಯಿಂದಲೆ ಸಮಸ್ತ ಶತ್ರುಗಳನ್ನು ಏಕೆ ಭಸ್ಮಮಾಡುವುದಿಲ್ಲ ? ಸಮಸ್ತ ಅಸುರರಲ್ಲಿ ಶಸ್ತ್ರಗಳನ್ನು ಏಕೆ ಪ್ರಯೋಗಿಸುತ್ತೀಯೆ? " ಶತ್ರುಗಳು ಕೂಡ ಶಸ್ತ್ರಪೀಡೆಯಿಂದ ಪಾವನರಾಗಿ ಪುಣ್ಯಲೋಕಕ್ಕೆ ಸೇರಲಿ " ಎಂಬ ಸತ್ಸಂಕಲ್ಪವನ್ನು ಆ ಶತ್ರುಗಳಲ್ಲಿ ಇಟ್ಟು ಪ್ರೀತಿಯಿಂದ ಅವರನ್ನು ಉದ್ಧಾರಮಾಡುತ್ತೀಯೆ.

೨೦. ದೇವಿಯೆ ! ನಿನ್ನ ಖಡ್ಗದಿಂದ ಹೊರಸೂಸುವ ಪ್ರಭಾ ಸಮೂಹದ ಪ್ರಸಾರಗಳಿಂದಲೂ ಹಾಗು ಉಗ್ರವಾದ ಶೂಲದ ಅಗ್ರಭಾಗದ ತೀಕ್ಷ್ಣಕಾಂತಿ ಪ್ರವಾಹದಿಂದಲೂ ದುಷ್ಟದೈತ್ಯರ ದೃಷ್ಟಿಗಳು ನಾಶಹೊಂದದೆ ಇರುವುವು.

ಯನ್ನಾಗತಾ ವಿಲಯಮಂಶುಮದಿನ್ದುಖಣ್ಡ-
ಯೋಗ್ಯಾನನಂ ತವ ವಿಲೋಕಯತಾಂ ತದೇತತ್ ॥೨೦॥

ದುರ್ವೃತ್ತವೃತ್ತಶಮನಂ ತವ ದೇವಿ ಶೀಲಂ
ರೂಪಂ ತಥೈತದವಿಚಿನ್ತ್ಯಮತುಲ್ಯಮನ್ಯೈಃ ।
ವೀರ್ಯಂ ಚ ಹನ್ತೃ ಹೃತದೇವಪರಾಕ್ರಮಾಣಾಂ
ವೈರಿಷ್ವಪಿ ಪ್ರಕಟಿತೈವ ದಯಾ ತ್ವಯೇತ್ಥಮ್ ॥೨೧॥

ಕೇನೋಪಮಾ ಭವತು ತೇಽಸ್ಯ ಪರಾಕ್ರಮಸ್ಯ
ರೂಪಂ ಚ ಶತ್ರುಭಯಕಾರ್ಯತಿಹಾರಿ ಕುತ್ರ ।
ಚಿತ್ತೇ ಕೃಪಾ ಸಮರನಿಷ್ಠುರತಾ ಚ ದೃಷ್ಟಾ
ತ್ವಯ್ಯೇವ ದೇವಿ ವರದೇ ಭುವನತ್ರಯೇಽಪಿ ॥೨೨॥

---

ಚಂದ್ರಕಲೆಯಿಂದ ಕೂಡಿ ಅಮೃತಕಿರಣಗಳ ಸ್ಪರ್ಶವಿರುವ ನಿನ್ನ ಮುಖವನ್ನು ನೋಡುತ್ತಿರುವುದೇ ಹಾಗೆ ಅಸುರರ ದೃಷ್ಟಿ ಭಂಗವಾಗದಿರಲು ಕಾರಣವಾಗಿದೆ.

೨೧. ದೇವಿಯೆ! ನಿನ್ನ ಶೀಲವು ದುರ್ಮಾರ್ಗದಲ್ಲಿ ನಡೆಯುವ ಮದಾಂಧರನ್ನು ಶಮನಮಾಡುವುದಾಗಿದೆ. ನಿನ್ನ ರೂಪವು ಮನಸ್ಸಿನಿಂದಲೂ ಯೋಚಿಸಲಾಗದ ಹಾಗೆ ಸರ್ವೋತ್ತಮವೂ ನಿರುಪಮವೂ ಆಗಿದೆ. ಮತ್ತು ವೀರ್ಯವು ದೇವತೆಗಳನ್ನು ಗೆದ್ದಿರುವ ಪರಾಕ್ರಮಶಾಲಿಗಳಾದ ರಾಕ್ಷಸರನ್ನು ನಿಗ್ರಹಿಸುವುದು. ಇಂತಹ ಗುಣಪೂರ್ಣಳಾದ ನೀನು ವೈರಿಗಳಲ್ಲಿ ಕೂಡ ದಯೆಯನ್ನು ಪ್ರಕಾಶಪಡಿಸಿದ್ದೀಯೆ.

೨೨. ಭಕ್ತರಿಗೆ ವರವನ್ನು ಅನುಗ್ರಹಿಸುವ ದೇವಿಯೆ! ನಿನ್ನ ಅದ್ಭುತ ಪರಾಕ್ರಮಕ್ಕೆ ಉಪಮಾನವೆಲ್ಲಿರುವುದು? ಶತ್ರುಗಳಿಗೆ ಭಯವನ್ನುಂಟು-ಮಾಡುವುದೂ ಸಾಧುಗಳಿಗೆ ಮನೋಹರವೂ ಆದ ನಿನ್ನ ರೂಪದಂತಹ ರೂಪವು ಬೇರೊಂದು ಎಡೆಯಲ್ಲಿ ಎಲ್ಲಿರುವುದು? ಮನಸ್ಸಿನಲ್ಲಿ ನಿಷ್ಠುರತೆ ಮತ್ತು ದಯಾರ್ದ್ರತೆಗಳು ಮೂರು ಲೋಕಗಳಲ್ಲಿ ನಿನ್ನೊಬ್ಬಳಲ್ಲಿಯೆ ಕಂಡುಬರುವುವು.

ತ್ರೈಲೋಕ್ಯಮೇತದಖಿಲಂ ರಿಪುನಾಶನೇನ
ತ್ರಾತಂ ತ್ವಯಾ ಸಮರಮೂರ್ಧನಿ ತೇಽಪಿ ಹತ್ವಾ ।
ನೀತಾ ದಿವಂ ರಿಪುಗಣಾಭಯಮಪ್ಯಪಾಸ್ತ-
ಮಸ್ಮಾಕಮುನ್ಮದಸುರಾರಿಭವಂ ನಮಸ್ತೇ ॥೨೩॥

ಶೂಲೇನ ಪಾಹಿ ನೋ ದೇವಿ ಪಾಹಿ ಖಡ್ಗೇನ ಚಾಮ್ಬಿಕೇ ।
ಘಣ್ಟಾಸ್ವನೇನ ನಃ ಪಾಹಿ ಚಾಪಜ್ಯಾನಿಃಸ್ವನೇನ ಚ ॥೨೪॥

ಪ್ರಾಚ್ಯಾಂ ರಕ್ಷ ಪ್ರತೀಚ್ಯಾಂ ಚ ಚಣ್ಡಿಕೇ ರಕ್ಷ ದಕ್ಷಿಣೇ ।
ಭ್ರಾಮಣೇನಾತ್ಮಶೂಲಸ್ಯ ಉತ್ತರಸ್ಯಾಂ ತಥೇಶ್ವರಿ ॥೨೫॥

ಸೌಮ್ಯಾನಿ ಯಾನಿ ರೂಪಾಣಿ ತ್ರೈಲೋಕ್ಯೇ ವಿಚರನ್ತಿ ತೇ ।
ಯಾನಿ ಚಾತ್ಯನ್ತಘೋರಾಣಿ ತೈ ರಕ್ಷಾಸ್ಮಾಂಸ್ತಥಾ ಭುವಮ್ ॥೨೬॥

---

೨೩. ದೇವಿಯೇ! ನಿನ್ನಿಂದ ಶತ್ರುಗಳನ್ನು ಸಂಹಾರ ಮಾಡಿ ಈ ಸಮಸ್ತ ತ್ರೈಲೋಕ್ಯವು ಸಂರಕ್ಷಿಸಲ್ಪಟ್ಟಿತು. ಅಂತಹ ಶತ್ರುಗಳ ಗುಂಪುಗಳು ರಣರಂಗವಲ್ಲಿ ಶಸ್ತ್ರಪಾತದಿಂದ ಪಾವನಗೊಳಿಸಲ್ಪಟ್ಟವುಗಳಾಗಿ ಸ್ವರ್ಗಕ್ಕೆ ಕಳುಹಿಸಲ್ಪಟ್ಟುವು. ಮದಾಂಧರಾದ ರಾಕ್ಷಸರನ್ನು ಕೊಂದು ನಮಗೆ ಆ ಭಯವು ನಿವಾರಿಸಲ್ಪಟ್ಟಿತು. ಹೀಗೆ ಸಮಸ್ತ ಜಂತುಗಳಿಗೆ ಉಪಕಾರಮಾಡಿದ ನಿನ್ನನ್ನು ವಂದಿಸುವೆವು.

೨೪. ಮಹಾದೇವಿಯೆ! ನಮ್ಮನ್ನು ಯಾವಾಗಲೂ ನಿನ್ನ ಶೂಲಾಯುಧದಿಂದ ನಮ್ಮ ಅರಿಗಳನ್ನು ನಾಶಮಾಡಿ ರಕ್ಷಿಸು. ಜಗನ್ಮಾತೆಯೆ! ಖಡ್ಗಾಯುಧದಿಂದ ನಮ್ಮನ್ನು ಪಾಲಿಸು. ದೇವಿಯೆ! ಘಂಟಾಧ್ವನಿಯಿಂದ ನಮ್ಮನ್ನು ಸಲಹು. ಹಾಗು ಬಿಲ್ಲಿನ ಹೆದೆಯಿಂದ ನಮ್ಮನ್ನು ಸಂರಕ್ಷಿಸು.

೨೫. ಸರ್ವೇಶ್ವರಿಯಾದ ದೇವಿಯೇ! ಚಂಡಿಕಾಂಬಿಕೆಯೆ! ನಿನ್ನ ಶೂಲವನ್ನು ಸುತ್ತಲೂ ಬೀಸುತ್ತ ನಮ್ಮನ್ನು ಪೂರ್ವ-ಪಶ್ಚಿಮ ದಿಕ್ಕುಗಳಲ್ಲಿ ರಕ್ಷಣೆಮಾಡು, ಹಾಗು ದಕ್ಷಿಣ-ಉತ್ತರ ದಿಕ್ಕುಗಳಲ್ಲಿ ಭಯವನ್ನು ನಿವಾರಣಮಾಡು.

೨೬. ದೇವಿಯೆ! ನಿನ್ನ ಕೆಲವು ಸೌಮ್ಯರೂಪಗಳು ತ್ರಿಲೋಕಗಳಲ್ಲಿ ಸಂಚರಿಸುತ್ತಿವೆ. ಮತ್ತೆ ಕೆಲವು ಅತ್ಯಂತ ಘೋರವಾದ ರೂಪಗಳು ಎಲ್ಲೆಡೆಗಳಲ್ಲಿಯೂ ಸಂಚಾರಮಾಡುತ್ತಿವೆ. ಆ ರೂಪಗಳಿಂದ ನೀನು ನಮ್ಮನ್ನೂ ಅಖಂಡ ಭೂಮಿಯನ್ನೂ ರಕ್ಷಿಸು.

ಖಡ್ಗಶೂಲಗದಾದೀನಿ ಯಾನಿ ಚಾಸ್ತ್ರಾಣಿ ತೇಽಮ್ಬಿಕೇ ।
ಕರಪಲ್ಲವಸಙ್ಗೀನಿ ತೈರಸ್ಮಾನ್ರಕ್ಷ ಸರ್ವತಃ ॥೨೭॥

ಋಷಿರುವಾಚ :—

ಏವಂ ಸ್ತುತಾ ಸುರೈರ್ದಿವ್ಯೈಃ ಕುಸುಮೈರ್ನನ್ದನೋದ್ಭವೈಃ ।
ಅರ್ಚಿತಾ ಜಗತಾಂ ಧಾತ್ರೀ ತಥಾ ಗನ್ಧಾನುಲೇಪನೈಃ ॥೨೮॥

ಭಕ್ತ್ಯಾ ಸಮಸ್ತೈಸ್ತ್ರಿದಶೈರ್ದಿವ್ಯಧೂಪೈಃ ಸುಧೂಪಿತಾ ।
ಪ್ರಾಹ ಪ್ರಸಾದಸುಮುಖೀ ಸಮಸ್ತಾನ್ಪ್ರಣತಾನ್ ಸುರಾನ್ ॥೨೯॥

---

೨೭. ಚಂಡಿಕಾಂಬಿಕೆಯೇ! ಖಡ್ಗ-ಶೂಲ-ಗದೆ ಮುಂತಾದ ಯಾವ ಬಗೆಬಗೆಯ ಆಯುಧಗಳು ಚಿಗುರಿನಂತೆ ಸುಂದರವಾದ ನಿನ್ನ ಕೈಗಳಲ್ಲಿ ಶೋಭಿಸುತ್ತಿವೆಯೊ ಆ ಸಮಸ್ತ ಆಯುಧಗಳಿಂದ ನಮ್ಮನ್ನು ಎಲ್ಲೆಡೆಗಳಲ್ಲಿಯೂ ರಕ್ಷಣಮಾಡು.

ಸುಮೇಧ ಋಷಿಯು ಹೇಳಿದನು :—

೨೮. ಜಗತ್ತಿನ ರಕ್ಷಣೆಗೆ ಅವತರಿಸಿದ ದೇವಿಯು ಸಮಸ್ತ ದೇವತೆಗಳಿಂದ ಈ ರೀತಿಯಾಗಿ ಸ್ತುತಿಸಲ್ಪಟ್ಟಳು. ನಂದನವನದಲ್ಲಿರುವ ದಿವ್ಯ ಕುಸುಮಗಳನ್ನು ತಂದು ಅರ್ಚಿಸಲ್ಪಟ್ಟಳು. ಮತ್ತು ಸುಗಂಧದ ಅನುಲೇಪನದಿಂದ ಪೂಜಿಸಲ್ಪಟ್ಟಳು.

೨೯. ಮತ್ತು ದೇವಿಯು ಸಮಸ್ತ ದೇವತೆಗಳಿಂದ ಭಕ್ತಿಪೂರ್ವಕವಾಗಿ ಉತ್ತಮವಾದ ಧೂಪೋಪಚಾರವನ್ನು ಅರ್ಪಿಸಿ ಪೂಜಿಸಲ್ಪಟ್ಟಳು. ತರುವಾಯ ನಮಸ್ಕರಿಸಿದ ದೇವತೆಗಳನ್ನು ಕುರಿತು ಅನುಗ್ರಹಮಾಡುವ ಮುಖಭಾವವನ್ನು ತೋರಿಸುತ್ತ ಮಾತನಾಡಿದಳು.

ಶ್ರೀದೇವ್ಯುವಾಚ :—

ವ್ರಿಯತಾಂ ತ್ರಿದಶಾಃ ಸರ್ವೇ ಯದಸ್ಮತ್ತೋಽಭಿವಾಞ್ಛಿತಮ್ ।
ದದಾಮ್ಯಹಮಿತಿ ಪ್ರೀತ್ಯಾ ಸ್ತವೈರೇಭಿಃ ಸುಪೂಜಿತಾ ॥೩೦॥

ಕರ್ತವ್ಯಮಪರಂ ಯಚ್ಚ ದುಷ್ಕರಂ ತನ್ನ ವಿದ್ಮಹೇ ।
ಇತ್ಯಾಕರ್ಣ್ಯ ವಚೋ ದೇವ್ಯಾಃ ಪ್ರತ್ಯೂಚುಸ್ತೇ ದಿವೌಕಸಃ ॥೩೧॥

ದೇವಾ ಊಚುಃ :—

ಭಗವತ್ಯಾ ಕೃತಂ ಸರ್ವಂ ನ ಕಿಂಚಿದವಶಿಷ್ಯತೇ ।
ಯದಯಂ ನಿಹತಃ ಶತ್ರುರಸ್ಮಾಕಂ ಮಹಿಷಾಸುರಃ ॥೩೨॥

---

ದೇವಿಯು ಹೀಗೆಂದಳು :—

೩೦. ದೇವತೆಗಳೆ! ನೀವು ನನ್ನಿಂದ ಹೊಂದಬೇಕೆಂದಿರುವ ಇಷ್ಟ-ಫಲವೇನಿದೆಯೊ ಅದನ್ನು ಕೇಳಿಕೊಳ್ಳಿರಿ. ಹೀಗೆ ಬಹು ಪ್ರೀತಿಪೂರ್ವಕವಾಗಿ ಸ್ತುತಿಪಾಠ-ಪುಷ್ಪೋಪಹಾರಾದಿಗಳಿಂದ ಪೂಜಿಸಲ್ಪಟ್ಟಿರುವ ನಾನು ನಿಮ್ಮಲ್ಲಿ ಪ್ರೀತಿಯಿಂದ ವರವನ್ನು ಕೊಡುವವಳಾಗಿದ್ದೇನೆ.

೩೧. ಈಗ ಜರುಗಿದ ದುಷ್ಟರಾಕ್ಷಸ ಮರ್ದನವನ್ನು ಬಿಟ್ಟು ನಿಮಗೆ ಅಸಾಧ್ಯವಾದ ಕರ್ತವ್ಯವು ಇನ್ನೇನಿದೆಯೋ ಅದು ನನಗೆ ತಿಳಿಯದು. ಹೀಗೆಂಬ ದೇವಿಯ ವಚನವನ್ನು ಕೇಳಿದ ದೇವತೆಗಳೆಲ್ಲರೂ ಪ್ರತ್ಯುತ್ತರವನ್ನು ನಿವೇದಿಸಿದರು.

ದೇವತೆಗಳಿಂತೆಂದರು :—

೩೨. ಅಖಂಡೈಶ್ವರ್ಯಸಂಪನ್ನಳಾದ ನೀನು ನಮ್ಮ ಸಕಲ ಇಷ್ಟವನ್ನು ಸಾಧಿಸಿ ಅನುಗ್ರಹಿಸಿದ್ದೀಯೆ. ಇನ್ನಾವುದೂ ಉಳಿದಿಲ್ಲ. ನಮಗೆ ಶತ್ರುವಾಗಿ ದೇವಲೋಕದಿಂದ ನಮ್ಮನ್ನು ಭ್ರಂಶಗೊಳಿಸಿದ ಮಹಿಷಾಸುರನನ್ನು ವಧಿಸ-ಬೇಕೆಂಬುದೇ ನಮ್ಮ ಇಷ್ಟವಾಗಿದ್ದಿತು. ಅಸುರನು ಹತನಾದನು.

ಯದಿ ಚಾಪಿ ವರೋ ದೇಯಸ್ತ್ವಯಾಸ್ಮಾಕಂ ಮಹೇಶ್ವರಿ ।
ಸಂಸ್ಮೃತಾ ಸಂಸ್ಮೃತಾ ತ್ವಂ ನೋ ಹಿಂಸೇಥಾಃ ಪರಮಾಪದಃ ॥೩೩॥

ಯಶ್ಚ ಮರ್ತ್ಯಃ ಸ್ತವೈರೇಭಿಸ್ತ್ವಾಂ ಸ್ತೋಷ್ಯತ್ಯಮಲಾನನೇ ।
ತಸ್ಯ ವಿತ್ತರ್ಧಿವಿಭವೈರ್ಧನದಾರಾದಿಸಮ್ಪದಾಮ್ ॥೩೪॥

ವೃದ್ಧಯೇಽಸ್ಮತ್ಪ್ರಸನ್ನಾ ತ್ವಂ ಭವೇಥಾಃ ಸರ್ವದಾಮ್ಬಿಕೇ ॥೩೫॥

ಋಷಿರುವಾಚ :—

ಇತಿ ಪ್ರಸಾದಿತಾ ದೇವೈರ್ಜಗತೋಽರ್ಥೇ ತಥಾತ್ಮನಃ ।
ತಥೇತ್ಯುಕ್ತ್ವಾ ಭದ್ರಕಾಲೀ ಬಭೂವಾನ್ತರ್ಹಿತಾ ನೃಪ ॥೩೬॥

---

೩೩. ಮಹೇಶ್ವರಿಯೆ! ಆದರೂ ಇನ್ನು ಕೇಳಿಕೊಳ್ಳುವೆವು. ಪ್ರಸನ್ನ-ಳಾದ ನೀನು ನಮಗೆ ವರವನ್ನು ಕೊಡುವೆಯಾದರೆ ಪರಿಹರಿಸಿಕೊಳ್ಳಲಾಗದ ಕಷ್ಟದಶೆಯು ನಮಗೆ ಉಂಟಾಗಿ ನಾವು ನಿನ್ನನ್ನು ಸ್ಮರಿಸಿಕೊಂಡಾಗ ಯಾವಾಗಲೂ ನೀನು ಬಂದು ನಮ್ಮ ಕಷ್ಟಗಳನ್ನು ಪರಿಹರಿಸಬೇಕು.

೩೪. ನಿರ್ಮಲವಾಗಿ ಶೋಭಿಸುವ ಮುಖವುಳ್ಳ ದೇವಿಯೆ! ಯಾವ ಮಾನವನು ಈ ಪವಿತ್ರವಾದ ಸ್ತುತಿವಚನಗಳಿಂದ ನಿನ್ನನ್ನು ಸ್ತೋತ್ರಮಾಡುವನೋ ಅವನಿಗೆ ಐಶ್ವರ್ಯ ಸಮೃದ್ಧಿಯನ್ನು ಮತ್ತು ಪತ್ನಿ-ಪುತ್ರ-ಗೃಹ-ಕ್ಷೇತ್ರ ಮುಂತಾದ ವಿಭವವನ್ನು ಅನುಗ್ರಹಿಸು.

೩೫. ಜಗದಂಬಿಕೆಯೆ! ಮತ್ತು ನಮ್ಮಲ್ಲಿ ಅನುಗ್ರಹ ತೋರಿಸಿರುವ ನೀನು ನಮ್ಮ ವಿಜ್ಞಾಪನೆಯಂತೆ ಈ ಸ್ತೋತ್ರದಿಂದ ನಿನ್ನನ್ನು ಭಜಿಸಿದ ಮಾನವನಿಗೆ ಯಾವಾಗಲೂ ಸರ್ವವಿಧವಾದ ಐಶ್ವರ್ಯಸಮೃದ್ಧಿಗೆ ಕಾರಣಳಾಗು.

ಸುಮೇಧ ಮುನಿಯು ಹೇಳಿದನು :—

೩೬. ಎಲೈ, ಸುರಥರಾಜನೇ! ದೇವತೆಗಳಿಂದ ಜಗತ್ತಿನ ಕಲ್ಯಾಣ ಮತ್ತು ತಮ್ಮ ಹಿತಕ್ಕೋಸ್ಕರ ಈ ರೀತಿಯಾಗಿ ಪ್ರಾರ್ಥಿಸಲ್ಪಟ್ಟು ಪ್ರಸನ್ನಳಾದ ಭದ್ರಕಾಳೀದೇವಿಯು "ಹಾಗೆ ಆಗಲಿ" ಎಂದು ಹೇಳಿ ವರವನ್ನು ಕೊಟ್ಟು ಅದೃಶ್ಯಳಾದಳು.

ಇತ್ಯೇತತ್ಕಥಿತಂ ಭೂಪ ಸಮ್ಭೂತಾ ಸಾ ಯಥಾ ಪುರಾ ।
ದೇವೀ ದೇವಶರೀರೇಭ್ಯೋ ಜಗತ್ತ್ರಯಹಿತೈಷಿಣೀ ॥೩೭॥

ಪುನಶ್ಚ ಗೌರೀದೇಹಾತ್ಸಾ ಸಮುದ್ಭೂತಾ ಯಥಾಭವತ್ ।
ವಧಾಯ ದುಷ್ಟದೈತ್ಯಾನಾಂ ತಥಾ ಶುಮ್ಭನಿಶುಮ್ಭಯೋಃ ॥೩೮॥

ರಕ್ಷಣಾಯ ಚ ಲೋಕಾನಾಂ ದೇವಾನಾಮುಪಕಾರಿಣೀ ।
ತಚ್ಛೃಣುಷ್ವ ಮಯಾಖ್ಯಾತಂ ಯಥಾವತ್ಕಥಯಾಮಿ ತೇ ॥೩೯॥

ಇತಿ ಶ್ರೀ ಮಾರ್ಕಣ್ಡೇಯ ಮಹಾಪುರಾಣೇ ದೇವೀಮಾಹಾತ್ಮ್ಯೇ
ಏಕಾಶೀತಿತಮೋಽಧ್ಯಾಯಃ

---

೩೭. ಸುರಥರಾಜನೇ! ಮಹಾಮಾಯಾರೂಪಿಣಿಯಾದ ದೇವಿಯು ಪೂರ್ವಕಲ್ಪದಲ್ಲಿ ಮೂರು ಜಗತ್ತಿನ ಹಿತವನ್ನು ಉಂಟುಮಾಡುವ ಸಂಕಲ್ಪವುಳ್ಳವಳಾಗಿ ದೇವಶರೀರಗಳ ತೇಜಸ್ಸುಗಳಿಂದ ಹೇಗೆ ಸಂಭವಿಸಿದಳೆಂಬುದು ನನ್ನಿಂದ ನಿನಗೆ ಹೇಳಲ್ಪಟ್ಟಿತು.

೩೮. ಮತ್ತೆ ಮಹಾದೇವಿಯು ಅನೇಕ ಮಂದಿ ದುಷ್ಟದೈತ್ಯರನ್ನು ಮತ್ತು ಶುಂಭ-ನಿಶುಂಭ ಎಂಬ ಪ್ರಧಾನ ರಾಕ್ಷಸರನ್ನು ವಧಿಸಲು ಗೌರಿಯ ದೇಹದಿಂದ ಹೇಗೆ ಆವಿರ್ಭವಿಸಿದಳೊ ಆ ಚರಿತ್ರೆಯನ್ನು ಹೇಳುವೆನು.

೩೯. ಮತ್ತು ಮಹಾದೇವಿಯು ಲೋಕಗಳನ್ನು ರಕ್ಷಿಸುವುದಕ್ಕೂ, ದೇವತೆಗಳಿಗೆ ಮತ್ತೆ ಉಪಕಾರಮಾಡುವುದಕ್ಕೂ ಗೌರಿಯ ದೇಹದಿಂದ ಆವಿರ್ಭಾವವನ್ನು ಹೊಂದಿರುವಳು. ಅದನ್ನು ಹಿಂದೆ ನಡೆದಂತೆ ನಿನಗೆ ಹೇಳುವೆನು. ನಾನು ಹೇಳುವ ಆ ಚರಿತ್ರೆಯನ್ನು ನೀನು ಕೇಳು.

ಮಾರ್ಕಂಡೇಯ ಮಹಾಪುರಾಣದಲ್ಲಿ ಎಂಭತ್ತೊಂದನೆಯ ಅಧ್ಯಾಯವು
ಮುಗಿದುದು.



|| ಓಂ ಶ್ರೀ ದುರ್ಗಾಯೈ ನಮಃ ||

# ಮಾರ್ಕಂಡೇಯ ಪುರಾಣಂ



## ದ್ವ್ಯಶೀತಿತಮೋಽಧ್ಯಾಯಃ

### (ದೇವೀ ಶುಮ್ಭ-ನಿಶುಮ್ಭದೂತಯೋಃ ಸಂವಾದಃ)

**ಋಷಿರುವಾಚ :—**

**ಪುರಾ ಶುಮ್ಭನಿಶುಮ್ಭಾಭ್ಯಾಮಸುರಾಭ್ಯಾಂ ಶಚೀಪತೇಃ ।**
**ತ್ರೈಲೋಕ್ಯಂ ಯಜ್ಞಭಾಗಾಶ್ಚ ಹೃತಾ ಮದಬಲಾಶ್ರಯಾತ್ ॥೧॥**

**ತಾವೇವ ಸೂರ್ಯತಾಂ ತದ್ವದಧಿಕಾರಂ ತಥೈನ್ದವಮ್ ।**
**ಕೌಬೇರಮಥ ಯಾಮ್ಯಂ ಚ ಚಕ್ರಾತೇ ವರುಣಸ್ಯ ಚ ॥೨॥**

---

### ಎಂಭತ್ತೆರಡನೆಯ ಅಧ್ಯಾಯ

ಸುಮೇಧ ಋಷಿಯು ಹೇಳಿದನು :—

೧. ಹಿಂದೆ ಒಂದು ಕಲ್ಪದಲ್ಲಿ ಶುಂಭ-ನಿಶುಂಭ ಎಂಬ ನಾಮಾಂಕಿತರಾದ ಇಬ್ಬರು ಅಸುರರಿಂದ ಅಂಹಕಾರ ಸೈನ್ಯಬಲಗಳ ಆಶ್ರಯದಿಂದ ದೇವೇಂದ್ರನ ತ್ರೈಲೋಕಾಧಿಕಾರ ಮತ್ತು ದೇವತೆಗಳ ಹವಿರ್ಭಾಗಗಳು ಅಪಹರಿಸಲ್ಪಟ್ಟುವು.

೨. ಇದರ ಪರಿಣಾಮವಾಗಿ ಶುಂಭ-ನಿಶುಂಭ ಅಸುರರು ಸೂರ್ಯ-ಚಂದ್ರರ ಅಧಿಕಾರವನ್ನು ವಹಿಸಿಕೊಂಡರು. ಹಾಗು ಕುಬೇರ-ಯಮ-ವರುಣ ಎಂಬೀ ಲೋಕಪಾಲಕರ ಪದವಿಗಳನ್ನು ಆಕ್ರಮಿಸಿದರು.

ತಾವೇವ ಪವನರ್ಧಿಂ ಚ ಚಕ್ರತುರ್ವಹ್ನಿಕರ್ಮ ಚ ||೩||

ಅನ್ಯೇಷಾಂ ಚಾಧಿಕಾರಾನ್ಸ ಸ್ವಯಮೇವಾಧಿತಿಷ್ಠತಿ |
ತತೋ ದೇವಾ ವಿನಿರ್ಧೂತಾ ಭ್ರಷ್ಟರಾಜ್ಯಾಃ ಪರಾಜಿತಾಃ ||೪||

ಹೃತಾಧಿಕಾರಾಸ್ತ್ರಿದಶಾಸ್ತಾಭ್ಯಾಂ ಸರ್ವೇ ನಿರಾಕೃತಾಃ |
ಮಹಾಸುರಾಭ್ಯಾಂ ತಾಂ ದೇವೀಂ ಸಂಸ್ಮರನ್ತ್ಯಪರಾಜಿತಾಮ್ ||೫||

ತಯಾಸ್ಮಾಕಂ ವರೋ ದತ್ತೋ ಯಥಾಪತ್ಸು ಸ್ಮೃತಾಖಿಲಾಃ |
ಭವತಾಂ ನಾಶಯಿಷ್ಯಾಮಿ ತತ್ಕ್ಷಣಾತ್ ಪರಮಾಪದಃ ||೬||

---

೩. ಹಾಗೆಯೇ ಶುಂಭ-ನಿಶುಂಭಾಸುರರು ವಾಯುದೇವತೆಯ ಅಧಿಕಾರ ವೈಭವವನ್ನೂ ಅಗ್ನಿದೇವನು ಅನುಭವಿಸುತ್ತಿದ್ದ ಅಧಿಕಾರಗೌರವವನ್ನೂ ಬಲಾತ್ಕಾರವಾಗಿ ಕಿತ್ತುಕೊಂಡರು.

೪. ಹೀಗೆ ಶುಂಭಾಸುರನು ಇತರ ದೇವತೆಗಳ ಅಧಿಕಾರಗಳನ್ನು ತಾನು ಆಕ್ರಮಿಸಿ ನಡೆಯಿಸಿದನು. ತರುವಾಯ ದೇವತೆಗಳು ಅಸುರರಿಂದ ಧಿಕ್ಕರಿಸಲ್ಪಟ್ಟವರೂ ರಾಜ್ಯಭ್ರಷ್ಟರೂ ಮತ್ತು ಅಸುರರಿಂದ ಪರಾಜಯಹೊಂದಿದವರೂ ಆದರು.

೫. ಆಗ ಹಾಗೆ ಮದಿಸಿದ ಶುಂಭ-ನಿಶುಂಭ ಮಹಾಸುರರಿಂದ ಅಪಹರಿಸಲ್ಪಟ್ಟ ಅಧಿಕಾರವುಳ್ಳವರೂ ಮತ್ತು ದೂರ ಓಡಿಸಲ್ಪಟ್ಟವರೂ ಆದ ದೇವತೆಗಳು ಎಲ್ಲರೂ ಸೇರಿ ಎಲ್ಲಿಲ್ಲೂ ಪರಾಜಯಹೊಂದದಂತೆ ಜಯಪ್ರಾಪ್ತಿಗೆನಿಮಿತ್ತಳಾದ ದೇವಿಯನ್ನು ಸ್ಮರಿಸಿದರು.

೬. "ಆಪತ್ತಿಗೆ ಗುರಿಯಾಗಿರುವಾಗ ನೀವು ನನ್ನನ್ನು ಸ್ಮರಿಸಿರಿ. ಆ ಕ್ಷಣದಲ್ಲಿ ನಾನು ನಿಮ್ಮ ಮಹಾಸಂಕಟಗಳನ್ನು ನಾಶಮಾಡಿ ನಿಮ್ಮನ್ನು ತಮ್ಮ ತಮ್ಮ ಪದದಲ್ಲಿ ಸುಖವಾಗಿರಿಸುವೆನು" ಹೀಗೆಂದು ದೇವಿಯಿಂದ ನಮಗೆ ವರವು ನೀಡಲ್ಪಟ್ಟದೆ.

ಇತಿ ಕೃತ್ವಾ ಮತಿಂ ದೇವಾ ಹಿಮವನ್ತಂ ನಗೇಶ್ವರಮ್ ।
ಜಗ್ಮುಸ್ತತ್ರ ತತೋ ದೇವೀಂ ವಿಷ್ಣುಮಾಯಾಂ ಪ್ರತುಷ್ಟುವುಃ ॥೭॥

ದೇವಾ ಊಚುಃ :—

ನಮೋ ದೇವ್ಯೈ ಮಹಾದೇವ್ಯೈ ಶಿವಾಯೈ ಸತತಂ ನಮಃ ।
ನಮಃ ಪ್ರಕೃತ್ಯೈ ಭದ್ರಾಯೈ ನಿಯತಾಃ ಪ್ರಣತಾಃ ಸ್ಮ ತಾಮ್ ॥೮॥

ರೌದ್ರಾಯೈ ನಮೋ ನಿತ್ಯಾಯೈ ಗೌರ್ಯೈ ಧಾತ್ರ್ಯೈ ನಮೋ ನಮಃ ।
ನಮೋ ಜಗತ್ಪ್ರತಿಷ್ಠಾಯೈ ದೇವ್ಯೈ ಕೃತ್ಯೈ ನಮೋ ನಮಃ ॥೯॥

ಜ್ಯೋತ್ಸ್ನಾಯೈ ಚನ್ದ್ರರೂಪಿಣ್ಯೈ ಸುಖಾಯೈ ಸತತಂ ನಮಃ ।
ಕಲ್ಯಾಣ್ಯೈ ಪ್ರಣತಾವೃದ್ಧ್ಯೈ ಸಿದ್ಧ್ಯೈ ಕೂರ್ಮ್ಯೈ ನಮೋ ನಮಃ ॥೧೦॥

---

೭. ಹೀಗೆಂದು ದೇವಿಯ ವಚನವನ್ನು ನೆನೆಸಿಕೊಂಡಿರುವ ದೇವತೆಗಳು ಪರ್ವತರಾಜನಾದ ಹಿಮಾಲಯಗಿರಿಗೆ ಹೋದರು. ಮತ್ತು ಅಲ್ಲಿ ಶರಣಾಗತ-ವತ್ಸಲೆಯಾದ ವಿಷ್ಣುಮಾಯಾಸ್ವರೂಪಳಾದ ದೇವಿಯನ್ನು ಸ್ತುತಿಮಾಡಿದರು.

ದೇವತೆಗಳು ಇಂತು ಸ್ತುತಿಸಿದರು :—

೮. ಪ್ರಕಾಶಸ್ವರೂಪಳೂ, ಮಹಾದೇವನ ಪತ್ನಿಯೂ ಮತ್ತು ಮಂಗಳವನ್ನು ಕೊಡುವವಳೂ ಆದ ದೇವಿಗೆ ನಿರಂತರವಾಗಿ ವಂದಿಸುವೆವು. ಮತ್ತು ಜಗತ್ತಿಗೆ ಮೂಲಕಾರಣಳೂ ಮಂಗಳಾಂಗಿಯೂ ಆದ ಮಹಾದೇವಿಯನ್ನು ಜಿತೇಂದ್ರಿಯರಾದ ನಾವು ನಮಸ್ಕರಿಸುವೆವು.

೯. ರೌದ್ರಾಕಾರವುಳ್ಳವಳೂ, ತ್ರಿಕಾಲಾತೀತಳೂ, ಪಾರ್ವತೀ-ಸ್ವರೂಪಳೂ ಮತ್ತು ಭೂಮಿದೇವತಾರೂಪಳೂ ಆದ ನಿನ್ನನ್ನು ಮತ್ತೆ ಮತ್ತೆ ವಂದಿಸುವೆವು. ಜಗತ್ತಿಗೆ ಉತ್ತಮ ಆಧಾರಸ್ವರೂಪಳೂ, ಜಂತುವಿನ ಕೃತಿ-ಸ್ವರೂಪಳೂ ಆದ ದೇವಿಗೆ ಅನೇಕ ವಂದನೆಗಳು.

೧೦. ಬೆಳದಿಂಗಳಿನ ರೂಪಳೂ, ಚಂದ್ರನ ಸ್ವರೂಪಳೂ ಮತ್ತು ಸಮಸ್ತ ಲೋಕಕ್ಕೆ ಸುಖಪ್ರದಳೂ ಆದ ದೇವಿಯನ್ನು ಸಂತತವಾಗಿ ವಂದಿಸುವೆವು. ಹಾಗು ಮಂಗಳವನ್ನು ಕೊಡುವವಳೂ, ತನ್ನನ್ನು ಭಜಿಸುವ ಮಾನವರಿಗೆ ಸಮೃದ್ಧಿ, ಕಾರ್ಯಸಿದ್ಧಿಯನ್ನು ಅನುಗ್ರಹಿಸುವವಳೂ ಮತ್ತು ಕೂರ್ಮದೇವತಾ-ಶಕ್ತಿಸ್ವರೂಪಳೂ ಆದ ದೇವಿಗೆ ವಂದನೆಗಳು.

ನೈರ್ಋತ್ಯೈ ಭೂಭೃತಾಂ ಲಕ್ಷ್ಮ್ಯೈ ಶರ್ವಾಣ್ಯೈ ತೇ ನಮೋ ನಮಃ ॥೧೧॥

ದುರ್ಗಾಯೈ ದುರ್ಗಪಾರಾಯೈ ಸಾರಾಯೈ ಸರ್ವಕಾರಿಣಿ ।
ಖ್ಯಾತ್ಯೈ ತಥೈವ ಕೃಷ್ಣಾಯೈ ಧೂಮ್ರಾಯೈ ಸತತಂ ನಮಃ ॥೧೨॥

ಅತಿಸೌಮ್ಯಾತಿರೌದ್ರಾಯೈ ನಮಸ್ತಸ್ಯೈ ನಮೋ ನಮಃ ।
ನಮೋ ಜಗತ್ಪ್ರತಿಷ್ಠಾಯೈ ದೇವ್ಯೈ ಕೃತ್ಯೈ ನಮೋ ನಮಃ ॥೧೩॥

ಯಾ ದೇವೀ ಸರ್ವಭೂತೇಷು ವಿಷ್ಣುಮಾಯೇತಿ ಶಬ್ದಿತಾ ।
ನಮಸ್ತಸ್ಯೈ ನಮಸ್ತಸ್ಯೈ ನಮಸ್ತಸ್ಯೈ ನಮೋ ನಮಃ ॥೧೪॥

---

೧೧. ಅನೀತಿಯಿಂದ ಆರ್ಜಿಸುವ ಅಲಕ್ಷ್ಮೀಸ್ವರೂಪಳೂ, ರಾಜಾಧಿರಾಜರಲ್ಲಿರುವ ಅಖಂಡ ಐಶ್ವರ್ಯಸ್ವರೂಪಳೂ ಮತ್ತು ಜಗತ್ತನ್ನು ಆನಂದಪಡಿಸುವ ಸರ್ವೇಶ್ವರನ ಪತ್ನಿಯೂ ಆದ ನಿನ್ನನ್ನು ಮತ್ತೆ ಮತ್ತೆ ನಮಸ್ಕರಿಸುತ್ತೇವೆ.

೧೨. ಸರ್ವವಸ್ತುಗಳಿಗೆ ಕಾರಣಳಾದ ಮಹಾಮಾಯಾದೇವಿಯೆ! ತಿಳಿಯಲು ಅಶಕ್ಯಸ್ವರೂಪಳೂ, ದುರ್ಗಮವಾದ ಪಾರವುಳ್ಳ ಅನಾದಿಮಾಯಾಸ್ವರೂಪಳೂ ಮತ್ತು ಸರ್ವೋತ್ತಮಳೂ ಆದ ನಿನಗೆ ಅನೇಕ ನಮಸ್ಕಾರಗಳು. ಖ್ಯಾತಿಸ್ವರೂಪಳೂ, ಕೃಷ್ಣವರ್ಣವುಳ್ಳ ಕಾಲರಾತ್ರಿಯೂ ಮತ್ತು ಧೂಮ್ರವರ್ಣಶೋಭಿತಳೂ ಆದ ನಿನಗೆ ನಮಸ್ಕಾರವು.

೧೩. ಎಲ್ಲ ಸೌಮ್ಯವಸ್ತುಗಳನ್ನು ಮೀರಿಸಿದ ಸೌಮ್ಯಸ್ವರೂಪ, ರೌದ್ರವಸ್ತುಗಳನ್ನು ಮೀರಿಸಿದ ರೌದ್ರಸ್ವರೂಪಗಳುಳ್ಳವಳಾದ ದೇವಿಯನ್ನು ಅತಿಶಯವಾಗಿ ನಮಸ್ಕರಿಸುವೆವು. ಜಗತ್ತಿನ ಪ್ರತಿಷ್ಠಾಸ್ವರೂಪಳೂ, ಸೃಷ್ಟಿ-ಸ್ಥಿತಿ-ಸಂಹಾರಗಳಿಗೆ ಅನುಕೂಲವಾದ ಯತ್ನಸ್ವರೂಪಳೂ ಆದ ಮಹಾದೇವಿಯನ್ನು ಪುನಃ ಪುನಃ ನಮಸ್ಕರಿಸುತ್ತೇವೆ.

೧೪. ಕಾಲತ್ರಯದ ವ್ಯಾಪ್ತಿಯಿಂದ ಆವರಿಸಲ್ಪಟ್ಟ ಸಮಸ್ತ ಭೂತಗಳಲ್ಲಿ ಅವಿದ್ಯೆಯನ್ನು ವಿಸ್ತರಿಸುವವಳಾದ, ವಿಷ್ಣುಮಾಯೆಯೆಂದು ಕರೆಯಲ್ಪಡುವ ಮಹಾದೇವಿಯನ್ನು ಕಾಯ-ವಾಕ್-ಮಾನಸಗಳೆಂಬ ತ್ರಿಕರಣಪೂರ್ವಕವಾಗಿ ಮತ್ತೆ ಮತ್ತೆ ಭಕ್ತಿಯಿಂದ ವಂದಿಸುವೆವು.

ಯಾ ದೇವೀ ಸರ್ವಭೂತೇಷು ಚೇತನೇತ್ಯಭಿಧೀಯತೇ |
ನಮಸ್ತಸ್ಯೈ ನಮಸ್ತಸ್ಯೈ ನಮಸ್ತಸ್ಯೈ ನಮೋ ನಮಃ ||೧೫||

ಯಾ ದೇವೀ ಸರ್ವಭೂತೇಷು ಬುದ್ಧಿರೂಪೇಣ ಸಂಸ್ಥಿತಾ |
ನಮಸ್ತಸ್ಯೈ ನಮಸ್ತಸ್ಯೈ ನಮಸ್ತಸ್ಯೈ ನಮೋ ನಮಃ ||೧೬||

ಯಾ ದೇವೀ ಸರ್ವಭೂತೇಷು ನಿದ್ರಾರೂಪೇಣ ಸಂಸ್ಥಿತಾ |
ನಮಸ್ತಸ್ಯೈ ನಮಸ್ತಸ್ಯೈ ನಮಸ್ತಸ್ಯೈ ನಮೋ ನಮಃ ||೧೭||

ಯಾ ದೇವೀ ಸರ್ವಭೂತೇಷು ಕ್ಷುಧಾರೂಪೇಣ ಸಂಸ್ಥಿತಾ |
ನಮಸ್ತಸ್ಯೈ ನಮಸ್ತಸ್ಯೈ ನಮಸ್ತಸ್ಯೈ ನಮೋ ನಮಃ ||೧೮||

---

೧೫. ಯಾವ ದೇವಿಯು ಸಮಸ್ತ ಪ್ರಾಣಿಗಳಲ್ಲಿ ವ್ಯವಹಾರಕ್ಕೆ ಮೂಲವಾಗಿರುವ ಚೇತನಶಕ್ತಿಯೆಂದು ಅಥವಾ ಜ್ಞಾನಶಕ್ತಿಯೆಂದು ಕರೆಯಲ್ಪಡುವಳೋ ಅಂತಹ ದೇವಿಯನ್ನು ಮತ್ತೆ ಮತ್ತೆ ತ್ರಿಕರಣಗಳಿಂದ ನಮಸ್ಕರಿಸುತ್ತೇವೆ.

೧೬. ಎಲ್ಲ ಪ್ರಾಣಿಗಳಲ್ಲಿಯೂ ಯಾವ ದೇವಿಯು ಧರ್ಮಾನುಷ್ಠಾನಕ್ಕೆ ನಿಮಿತ್ತವಾದ ನಿಶ್ಚಯರೂಪವಾದ ಬುದ್ಧಿಯೆನಿಸಿರುವಳೋ ಅಂತಹ ದೇವಿಯನ್ನು ಮತ್ತೆ ಮತ್ತೆ ನಾವು ತ್ರಿಕರಣಗಳಿಂದ ವಂದಿಸುವೆವು.

೧೭. ಯಾವ ದೇವಿಯು ಸಮಸ್ತ ಭೂತಗಳಲ್ಲಿ ಜಾಗ್ರತ್-ಸ್ವಪ್ನ-ಸುಷುಪ್ತಿಗಳೆಂಬ ಅವಸ್ಥಾತ್ರಯಗಳಲ್ಲಿ ಸ್ವಪ್ನ-ಸುಷುಪ್ತಿಗಳಿಗೆ ಕಾರಣವಾಗಿ ವಿಶ್ರಾಂತಿಯನ್ನು ಕೊಡುವ ನಿದ್ರೆಯ ರೂಪದಿಂದ ಇರುವಳೊ ಆ ದೇವಿಯನ್ನು ಮತ್ತೆ ಮತ್ತೆ ನಮಸ್ಕರಿಸುವೆವು.

೧೮. ಯಾವ ದೇವಿಯು ಸಮಸ್ತ ಪ್ರಾಣಿಗಳಲ್ಲಿ ಶೋಕ-ಮೋಹ, ಜರಾ-ಮೃತ್ಯು, ಕ್ಷುತ್-ಪಿಪಾಸೆಯೆಂದು ಕರೆಯಲ್ಪಡುವ ಆರು ಊರ್ಮಿಗಳಲ್ಲಿ ಒಂದಾದ ಕ್ಷುಧೆಯೆಂಬ ರೂಪದಿಂದ ಇರುವಳೋ ಆ ದೇವಿಯನ್ನು ಮತ್ತೆ ಮತ್ತೆ ನಮಸ್ಕರಿಸುವೆವು.

ಯಾ ದೇವೀ ಸರ್ವಭೂತೇಷು ಛಾಯಾರೂಪೇಣ ಸಂಸ್ಥಿತಾ ।
ನಮಸ್ತಸ್ಯೈ ನಮಸ್ತಸ್ಯೈ ನಮಸ್ತಸ್ಯೈ ನಮೋ ನಮಃ ॥೧೯॥

ಯಾ ದೇವೀ ಸರ್ವಭೂತೇಷು ಶಕ್ತಿರೂಪೇಣ ಸಂಸ್ಥಿತಾ ।
ನಮಸ್ತಸ್ಯೈ ನಮಸ್ತಸ್ಯೈ ನಮಸ್ತಸ್ಯೈ ನಮೋ ನಮಃ ॥೨೦॥

ಯಾ ದೇವೀ ಸರ್ವಭೂತೇಷು ತೃಷ್ಣಾರೂಪೇಣ ಸಂಸ್ಥಿತಾ ।
ನಮಸ್ತಸ್ಯೈ ನಮಸ್ತಸ್ಯೈ ನಮಸ್ತಸ್ಯೈ ನಮೋ ನಮಃ ॥೨೧॥

ಯಾ ದೇವೀ ಸರ್ವಭೂತೇಷು ಕ್ಷಾನ್ತಿರೂಪೇಣ ಸಂಸ್ಥಿತಾ ।
ನಮಸ್ತಸ್ಯೈ ನಮಸ್ತಸ್ಯೈ ನಮಸ್ತಸ್ಯೈ ನಮೋ ನಮಃ ॥೨೨॥

---

೧೯. ಯಾವ ದೇವಿಯು ಸಕಲ ಪ್ರಾಣಿವರ್ಗದಲ್ಲಿ ಪ್ರತಿಬಿಂಬ ರೂಪದಿಂದ ಜೀವವೆಂದು ಕರೆಯಲ್ಪಡುತ್ತ ಸಮಸ್ತ ಪುರುಷಾರ್ಥ ಸಾಧಕವಾದ ವ್ಯವಹಾರವನ್ನು ನಡೆಸುತ್ತ ಇರುವಳೊ ಅಂತಹ ದೇವಿಯನ್ನು ಪದೇ ಪದೇ ವಂದಿಸುವೆವು.

೨೦. ಯಾವ ದೇವಿಯು ಸಕಲ ಪ್ರಾಣಿಗಳಲ್ಲಿ ಆಯಾಯ ಭೂತ-ವ್ಯಕ್ತಿಯಲ್ಲಿರುವ ಅಸಾಧಾರಣವಾದ ಕ್ರಿಯಾನಿರ್ವಾಹಮಾಡುವ ಶಕ್ತಿರೂಪದಿಂದ ಇರುವಳೋ ಆ ದೇವಿಯನ್ನು ತ್ರಿಕರಣಪೂರ್ವಕವಾಗಿ ಮತ್ತೆ ಮತ್ತೆ ವಂದಿಸುತ್ತೇವೆ.

೨೧. ಯಾವ ದೇವಿಯು ಸಮಸ್ತ ಪ್ರಾಣಿವರ್ಗದಲ್ಲಿ ಸಂಸಾರಬಂಧದಲ್ಲಿ ಬಂಧಿಸಲು ನಿಮಿತ್ತವಾದ, ಅರಿಷಡ್ವರ್ಗಗಳಲ್ಲಿ ಒಂದಾದ ತೃಷ್ಣಾರೂಪದಿಂದ ಇರುವಳೋ ಅಂತಹ ದೇವಿಯನ್ನು ಅನನ್ಯಗತಿಯಿಂದ ಮತ್ತೆ ಮತ್ತೆ ವಂದಿಸುವೆವು.

೨೨. ಯಾವ ದೇವಿಯು ಸರ್ವಭೂತಗಳಲ್ಲಿ ಎಂತಹ ಪ್ರಸಂಗದಲ್ಲಿಯೂ ರೌದ್ರಆಕಾರದ ವಿಕಾರವನ್ನು ಹೊಂದದಿರುವ ಕ್ಷಮಾ ಎಂಬ ಉತ್ತಮ ಗುಣ-ರೂಪದಿಂದಿರುವಳೊ ಆ ದೇವಿಯನ್ನು ಕಾಯ-ವಾಕ್-ಮಾನಸಗಳಿಂದ ಸಂತತವಾಗಿ ವಂದಿಸುವೆವು.

**ಯಾ ದೇವೀ ಸರ್ವಭೂತೇಷು ಜಾತಿರೂಪೇಣ ಸಂಸ್ಥಿತಾ ।**
**ನಮಸ್ತಸ್ಯೈ ನಮಸ್ತಸ್ಯೈ ನಮಸ್ತಸ್ಯೈ ನಮೋ ನಮಃ ॥೨೩॥**

**ಯಾ ದೇವೀ ಸರ್ವಭೂತೇಷು ಲಜ್ಜಾರೂಪೇಣ ಸಂಸ್ಥಿತಾ ।**
**ನಮಸ್ತಸ್ಯೈ ನಮಸ್ತಸ್ಯೈ ನಮಸ್ತಸ್ಯೈ ನಮೋ ನಮಃ ॥೨೪॥**

**ಯಾ ದೇವೀ ಸರ್ವಭೂತೇಷು ಶಾನ್ತಿರೂಪೇಣ ಸಂಸ್ಥಿತಾ ।**
**ನಮಸ್ತಸ್ಯೈ ನಮಸ್ತಸ್ಯೈ ನಮಸ್ತಸ್ಯೈ ನಮೋ ನಮಃ ॥೨೫॥**

**ಯಾ ದೇವೀ ಸರ್ವಭೂತೇಷು ಶ್ರದ್ಧಾರೂಪೇಣ ಸಂಸ್ಥಿತಾ ।**
**ನಮಸ್ತಸ್ಯೈ ನಮಸ್ತಸ್ಯೈ ನಮಸ್ತಸ್ಯೈ ನಮೋ ನಮಃ ॥೨೬॥**

---

೨೩. ಯಾವ ದೇವಿಯು ಸಮಸ್ತ ಪ್ರಾಣಿಗಳಲ್ಲಿ ಒಂದೊಂದು ವರ್ಗದಲ್ಲಿ ಪ್ರತ್ಯೇಕವಾಗಿ ನಿತ್ಯವೂ ಅನೇಕ ವ್ಯಕ್ತಿಗಳಲ್ಲಿರುವುದೂ ಮತ್ತು ಒಂದು ಧರ್ಮರೂಪವೂ ಆದ ಜಾತಿರೂಪದಿಂದ ಇರುವಳೋ ಅಂತಹ ದೇವಿಯನ್ನು ಮತ್ತೆ ಮತ್ತೆ ವಂದಿಸುವೆವು.

೨೪. ಯಾವ ದೇವಿಯು ಸಮಸ್ತ ಪ್ರಾಣಿಗಳಲ್ಲಿ ನಾರಿಯರಿಗೆ ಭೂಷಣವೆಂದೂ ಮತ್ತು ಸಾಧುಗುಣಗಳಲ್ಲಿ ಒಂದು ಗಣ್ಯಗುಣವೆಂದೂ ವರ್ಣಿಸಲ್ಪಡುವ ಲಜ್ಜಾರೂಪದಿಂದ ಇರುವಳೋ ಅಂತಹ ದೇವಿಯನ್ನು ತ್ರಿಕರಣಪೂರ್ವಕವಾಗಿ ನಮಸ್ಕರಿಸುವೆವು.

೨೫. ಯಾವ ದೇವಿಯು ಸಮಸ್ತ ಭೂತಗಳಲ್ಲಿ ಕಾಮ-ಕ್ರೋಧ ಮುಂತಾದ ಬಗೆಬಗೆಯ ಭಾವಗಳು ಅಡಗಿ ಮಾನಸಕ್ಕೆ ಆನಂದವನ್ನು ಉಂಟುಮಾಡುವ ಶಾಂತಿರೂಪದಿಂದ ಇರುವಳೊ ಅಂತಹ ದೇವಿಯನ್ನು ಪುನಃ ಪುನಃ ನಮಸ್ಕರಿಸುವೆವು.

೨೬. ಯಾವ ದೇವಿಯು ಸಮಸ್ತ ಪ್ರಾಣಿಗಳಲ್ಲಿ ದೈವ-ಪುರುಷಾರ್ಥ-ಸ್ವರ್ಗ-ನರಕ ಅವುಗಳ ಸಾಧನಗಳಲ್ಲಿ ಆಸ್ತಿಕತೆಯೆಂಬ ಶ್ರದ್ಧೆಯ ರೂಪದಿಂದ ಇರುವಳೊ ಆ ದೇವಿಯನ್ನು ಅನನ್ಯಭಕ್ತಿಯಿಂದ ಯಾವಾಗಲೂ ನಮಸ್ಕರಿಸುತ್ತೇವೆ.

ಯಾ ದೇವೀ ಸರ್ವಭೂತೇಷು ಕಾನ್ತಿರೂಪೇಣ ಸಂಸ್ಥಿತಾ ।
ನಮಸ್ತಸ್ಯೈ ನಮಸ್ತಸ್ಯೈ ನಮಸ್ತಸ್ಯೈ ನಮೋ ನಮಃ ॥೨೭॥

ಯಾ ದೇವೀ ಸರ್ವಭೂತೇಷು ಲಕ್ಷ್ಮೀರೂಪೇಣ ಸಂಸ್ಥಿತಾ ।
ನಮಸ್ತಸ್ಯೈ ನಮಸ್ತಸ್ಯೈ ನಮಸ್ತಸ್ಯೈ ನಮೋ ನಮಃ ॥೨೮॥

ಯಾ ದೇವೀ ಸರ್ವಭೂತೇಷು ಧೃತಿರೂಪೇಣ ಸಂಸ್ಥಿತಾ ।
ನಮಸ್ತಸ್ಯೈ ನಮಸ್ತಸ್ಯೈ ನಮಸ್ತಸ್ಯೈ ನಮೋ ನಮಃ ॥೨೯॥

ಯಾ ದೇವೀ ಸರ್ವಭೂತೇಷು ವೃತ್ತಿರೂಪೇಣ ಸಂಸ್ಥಿತಾ ।
ನಮಸ್ತಸ್ಯೈ ನಮಸ್ತಸ್ಯೈ ನಮಸ್ತಸ್ಯೈ ನಮೋ ನಮಃ ॥೩೦॥

---

೨೭. ಯಾವ ದೇವಿಯು ಸಮಸ್ತ ಪ್ರಾಣಿಗಳಲ್ಲಿ ಒಂದಕ್ಕಿಂತ ಮತ್ತೊಂದು ವ್ಯಕ್ತಿಯಲ್ಲಿ ತಾರತಮ್ಯದಿಂದ ಇರುವ ಮನರಂಜಕವಾದ ಕಾಂತಿ-ರೂಪದಿಂದ ಇರುವಳೊ ಅಂತಹ ದೇವಿಯನ್ನು ಮತ್ತೆ ಮತ್ತೆ ನಮಸ್ಕರಿಸುತ್ತೇವೆ.

೨೮. ಯಾವ ದೇವಿಯು ಸರ್ವ ಪ್ರಾಣಿಗಳಲ್ಲಿ ಸಾಮ್ರಾಜ್ಯ–ಐಶ್ವರ್ಯ-ಜಯ-ಮುಕ್ತಿ ಮುಂತಾದ ಪರಿವಾರದಿಂದ ಕೂಡಿದ ಬಗೆ ಬಗೆಯ ಲಕ್ಷ್ಮೀರೂಪ-ದಿಂದ ಇರುವಳೊ ಅಂತಹ ದೇವಿಯನ್ನು ನಾವು ಮತ್ತೆ ಮತ್ತೆ ವಂದಿಸುವೆವು.

೨೯. ಯಾವ ದೇವಿಯು ಸರ್ವಪ್ರಾಣಿಗಳಲ್ಲಿ ಧೈರ್ಯ–ಸಂತೋಷ ಅಥವಾ ಸುಖರೂಪವಾಗಿ ತೋರುವ ಧೃತಿಯ ರೂಪದಿಂದ ಪ್ರಕಾಶಿಸುತ್ತ ಇರುವಳೋ ಅಂತಹ ದೇವಿಯನ್ನು ನಾವು ಶುದ್ಧವಾದ ತ್ರಿಕರಣಗಳಿಂದ ಮತ್ತೆ ಮತ್ತೆ ವಂದಿಸುತ್ತೇವೆ.

೩೦. ಯಾವ ದೇವಿಯು ಸಮಸ್ತಪ್ರಾಣಿಗಳಲ್ಲಿ ಆಯಾಯ ಪ್ರಾಣಿಯ ಪ್ರಾಣಧಾರಣದ ಉಪಾಯವಾದ ಕೃಷಿ-ವಾಣಿಜ್ಯ ಅಥವಾ ಮತ್ತಾವುದಾದ-ರೊಂದು ಜೀವನೋಪಾಯದ ರೂಪದಿಂದ ಇರುವಳೋ ಅಂತಹ ದೇವಿಯನ್ನು ಮತ್ತೆ ಮತ್ತೆ ವಂದಿಸುತ್ತೇವೆ.

**ಯಾ ದೇವೀ ಸರ್ವಭೂತೇಷು ಸ್ಮೃತಿರೂಪೇಣ ಸಂಸ್ಥಿತಾ ।**
**ನಮಸ್ತಸ್ಯೈ ನಮಸ್ತಸ್ಯೈ ನಮಸ್ತಸ್ಯೈ ನಮೋ ನಮಃ ॥೩೧॥**

**ಯಾ ದೇವೀ ಸರ್ವಭೂತೇಷು ದಯಾರೂಪೇಣ ಸಂಸ್ಥಿತಾ ।**
**ನಮಸ್ತಸ್ಯೈ ನಮಸ್ತಸ್ಯೈ ನಮಸ್ತಸ್ಯೈ ನಮೋ ನಮಃ ॥೩೨॥**

**ಯಾ ದೇವೀ ಸರ್ವಭೂತೇಷು ನೀತಿರೂಪೇಣ ಸಂಸ್ಥಿತಾ ।**
**ನಮಸ್ತಸ್ಯೈ ನಮಸ್ತಸ್ಯೈ ನಮಸ್ತಸ್ಯೈ ನಮೋ ನಮಃ ॥೩೩॥**

**ಯಾ ದೇವೀ ಸರ್ವಭೂತೇಷು ತುಷ್ಟಿರೂಪೇಣ ಸಂಸ್ಥಿತಾ ।**
**ನಮಸ್ತಸ್ಯೈ ನಮಸ್ತಸ್ಯೈ ನಮಸ್ತಸ್ಯೈ ನಮೋ ನಮಃ ॥೩೪॥**

---

೩೧. ಯಾವ ದೇವಿಯು ಸಮಸ್ತ ಪ್ರಾಣಿವರ್ಗದಲ್ಲಿ ಹಿಂದೆ ಎಂದಾದರೂ ಅನುಭವಿಸಿರುವ ವಿಷಯದಲ್ಲಿ ಆಯಾಯ ಸಂಸ್ಕಾರಗಳಿಂದ ಮತ್ತೊಮ್ಮೆ ಜನಿಸುವ ಸ್ಮರಣರೂಪದಿಂದ ಇರುವಳೋ ಅಂತಹ ದೇವಿಯನ್ನು ತ್ರಿಕರಣಗಳಿಂದ ನಮಸ್ಕರಿಸುತ್ತೇವೆ.

೩೨. ಯಾವ ದೇವಿಯು ಸರ್ವಭೂತಗಳಲ್ಲಿ ಪರರ ದುಃಖವನ್ನು ನೋಡಿ ಮನಸ್ಸು ಕರಗಿ ಹೇಗಾದರೂ ಅದನ್ನು ನೀಗಿಸಬೇಕೆಂದು ಉದಯಿಸುವ ದಯಾರೂಪದಿಂದ ಇರುವಳೋ ಅಂತಹ ದೇವಿಯನ್ನು ಮತ್ತೆ ಮತ್ತೆ ನಮಸ್ಕರಿಸುತ್ತೇವೆ.

೩೩. ಯಾವ ದೇವಿಯು ಸಮಸ್ತ ಪ್ರಾಣಿಗಳಲ್ಲಿ ಲೋಕವ್ಯವಹಾರವನ್ನು ನಡೆಸುವ ನಿಯಮವನ್ನು ಪಾಲಿಸುವ ರಾಜನೀತಿ ಮುಂತಾದ ನೀತಿಯ ರೂಪದಿಂದ ಇರುವಳೋ ಅಂತಹ ದೇವಿಯನ್ನು ನಾವು ಏಕಾಗ್ರಚಿತ್ತರಾಗಿ ಮತ್ತೆ ಮತ್ತೆ ವಂದಿಸುತ್ತೇವೆ.

೩೪. ಯಾವ ದೇವಿಯು ಸಮಸ್ತ ಪ್ರಾಣಿಗಳಲ್ಲಿ ತಮ್ಮ ಮನಸ್ಸಿಗೆ ಇಷ್ಟವಾದ ವಿಷಯಸುಖದ ಉಪಭೋಗದಿಂದ ಉಂಟಾಗುವ ತುಷ್ಟಿರೂಪದಿಂದ ಇರುವಳೋ ಆ ದೇವಿಯನ್ನು ಬೇರೊಂದು ಕಡೆಗೆ ಗಮನವನ್ನಿಡದೆ ಮತ್ತೆ ಮತ್ತೆ ವಂದಿಸುತ್ತೇವೆ.

ಯಾ ದೇವೀ ಸರ್ವಭೂತೇಷು ಪುಷ್ಟಿರೂಪೇಣ ಸಂಸ್ಥಿತಾ ।
ನಮಸ್ತಸ್ಯೈ ನಮಸ್ತಸ್ಯೈ ನಮಸ್ತಸ್ಯೈ ನಮೋ ನಮಃ ॥೩೫॥

ಯಾ ದೇವೀ ಸರ್ವಭೂತೇಷು ಮಾತೃರೂಪೇಣ ಸಂಸ್ಥಿತಾ ।
ನಮಸ್ತಸ್ಯೈ ನಮಸ್ತಸ್ಯೈ ನಮಸ್ತಸ್ಯೈ ನಮೋ ನಮಃ ॥೩೬॥

ಯಾ ದೇವೀ ಸರ್ವಭೂತೇಷು ಭ್ರಾನ್ತಿರೂಪೇಣ ಸಂಸ್ಥಿತಾ ।
ನಮಸ್ತಸ್ಯೈ ನಮಸ್ತಸ್ಯೈ ನಮಸ್ತಸ್ಯೈ ನಮೋ ನಮಃ ॥೩೭॥

ಇನ್ದ್ರಿಯಾಣಾಮಧಿಷ್ಠಾತ್ರೀ ಭೂತಾನಾಮಖಿಲೇಷು ಯಾ ।
ಭೂತೇಷು ಸತತಂ ವ್ಯಾಪ್ತ್ಯೈ ತಸ್ಯೈ ದೇವ್ಯೈ ನಮೋ ನಮಃ ॥೩೮॥

---

೩೫. ಯಾವ ದೇವಿಯು ಸಮಸ್ತ ಭೂತವರ್ಗದಲ್ಲಿ ಅವಯವಗಳು ಆಯಾಯ ಪ್ರಾಣಿಗೆ ತಕ್ಕಂತೆ ತುಂಬಿಕೊಳ್ಳುವಿಕೆಯೆಂಬ ಪುಷ್ಟಿರೂಪದಿಂದ ಇರುವಳೊ ಅಂತಹ ದೇವಿಯನ್ನು ಕಾಯ-ವಾಕ್-ಮಾನಸಗಳ ವ್ಯಾಪಾರದಿಂದ ಮತ್ತೆ ಮತ್ತೆ ನಮಸ್ಕರಿಸುವೆವು.

೩೬. ಯಾವ ದೇವಿಯು ಸರ್ವ ಪ್ರಾಣಿಗಳಲ್ಲಿ ಗರ್ಭಧಾರಣ ಮೂಲಕ-ವಾಗಿ ಪ್ರಸವಕ್ಕೆ ಕಾರಣಳೂ ಮತ್ತು ಮಾನ್ಯಳೂ ಆದ ಜನನಿಯ ರೂಪದಿಂದಲೂ ಅಥವಾ ಬ್ರಾಹ್ಮೀ ಮುಂತಾದ ಅಷ್ಟಮಾತೃಕೆಯರ ರೂಪದಿಂದಲೂ ಇರುವಳೋ ಅಂತಹ ದೇವಿಯನ್ನು ನಮಸ್ಕರಿಸುವೆವು.

೩೭. ಯಾವ ದೇವಿಯು ಸಮಸ್ತ ಪ್ರಾಣಿಗಳಲ್ಲಿ ಒಂದನ್ನು ಮತ್ತೊಂದಾಗಿ ತಿಳಿಯುವಿಕೆಯೆಂಬ ಸರ್ವಾನರ್ಥಗಳಿಗೆ ಕಾರಣವಾದ ಭ್ರಾಂತಿಯ ರೂಪದಿಂದ ಇರುವಳೊ ಅಂತಹ ದೇವಿಯನ್ನು ಅನನ್ಯವ್ಯಾಪಾರದಿಂದ ಮತ್ತೆ ಮತ್ತೆ ವಂದಿಸುತ್ತೇವೆ.

೩೮. ಮತ್ತು ಯಾವ ದೇವಿಯು ಸಮಸ್ತ ಪ್ರಾಣಿವರ್ಗದಲ್ಲಿರುವ ಕರ್ಮ-ಜ್ಞಾನೇಂದ್ರಿಯಗಳ ಆಯಾಯ ಕಾರ್ಯಪ್ರವೃತ್ತಿಯಲ್ಲಿ ಕಾರಣಳಾಗಿ ಸಮಸ್ತ ಭೂತಗಳಲ್ಲಿ ಯಾವಾಗಲೂ ವ್ಯಾಪಿಸಿ ಸರ್ವಾತ್ಮಕಳಾಗಿರುವಳೊ ಆ ದೇವಿಯನ್ನು ಪುನಃ ಪುನಃ ವಂದಿಸುವೆವು.

**ಚಿತಿರೂಪೇಣ ಯಾ ಕೃತ್ಸ್ನಮೇತದ್ವ್ಯಾಪ್ಯ ಸ್ಥಿತಾ ಜಗತ್ ।**
**ನಮಸ್ತಸ್ಯೈ ನಮಸ್ತಸ್ಯೈ ನಮಸ್ತಸ್ಯೈ ನಮೋ ನಮಃ ॥೩೯॥**

**ಸುರಾಸುರೈಃ ಪೂರ್ವಮಭೀಷ್ಟಸಂಶ್ರಯಾ-**
**ತ್ತಥಾ ಸುರೇನ್ದ್ರೇಣ ದಿನೇಶಸೇವಿತಾ ।**
**ಕರೋತು ಸಾ ನಃ ಶುಭಹೇತುರೀಶ್ವರೀ**
**ಶುಭಾನಿ ಭದ್ರಾಣ್ಯಭಿಹನ್ತು ಚಾಪದಃ ॥೪೦॥**

**ಯಾ ಸಾಮ್ಪ್ರತಂ ಚೋದ್ಧತದೈತ್ಯತಾಪಿತೈ-**
**ರಸ್ಮಾಭಿರೀಶಾ ಚ ಸುರೈರ್ನಮಸ್ಯತೇ ।**
**ಯಾ ಚ ಸ್ಮೃತಾ ತತ್ಕ್ಷಣಮೇವ ಹನ್ತಿ ನಃ**
**ಸರ್ವಾಪದೋ ಭಕ್ತಿವಿನಮ್ರಮೂರ್ತಿಭಿಃ ॥೪೧॥**

---

೩೯. ಯಾವ ದೇವಿಯು ಚೈತನ್ಯರೂಪದಿಂದ ಸಂಪೂರ್ಣ ಜಗತ್ತನ್ನು ವ್ಯಾಪಿಸಿ ಎಲ್ಲ ಚರ-ಅಚರ ಪ್ರಾಣಿಗಳಲ್ಲಿ ಆತ್ಮರೂಪದಿಂದ ಇರುವಳೊ ಅಂತಹ ದೇವಿಯನ್ನು ತ್ರಿಕರಣಗಳ ಪೂರ್ವಕವಾಗಿ ಮತ್ತೆ ಮತ್ತೆ ನಮಸ್ಕರಿಸುತ್ತೇವೆ.

೪೦. ಪೂರ್ವಕಲ್ಪದಲ್ಲಿ ಒಂದು ಸಮಯ ನಿಖಿಲ ದೇವತೆಗಳಿಂದ ಸ್ತುತಿಸಲ್ಪಟ್ಟವಳೂ, ದೇವರಾಜನಾದ ಇಂದ್ರ-ಶಂಕರ ಮತ್ತು ಸೂರ್ಯದೇವರಿಂದ ತಮ್ಮ ತಮ್ಮ ಇಷ್ಟಫಲದ ಪ್ರಾಪ್ತಿಗೋಸ್ಕರ ಸೇವಿಸಲ್ಪಟ್ಟವಳೂ, ಮಂಗಳ-ವಾಗಲೆಂದು ಸಂಕಲ್ಪಿಸುವವಳೂ ಮತ್ತು ಕಲ್ಯಾಣಪ್ರಾಪ್ತಿಗೆ ಕಾರಣಳೂ ಆದ ಸರ್ವೇಶ್ವರಿಯು ನಮಗೆ ಮಂಗಳಪರಂಪರೆಯನ್ನು ಕೊಡಲಿ ಮತ್ತು ನಮ್ಮ ಆಪತ್ತುಗಳನ್ನು ಪರಿಹರಿಸಲಿ.

೪೧. ಮದಾಂಧರಾದ ದೈತ್ಯರಿಂದ ಪೀಡಿಸಲ್ಪಟ್ಟ ದೇವಲೋಕದಿಂದ ಭ್ರಷ್ಟರಾದ ನಮ್ಮಿಂದ ಈಗ ಯಾವ ದೇವಿಯು ಸ್ತುತಿಸಲ್ಪಡುತ್ತಿರುವಳೊ ಮತ್ತು ಭಕ್ತಿಯಿಂದ ಬಾಗಿದ ಅವಯವವುಳ್ಳ ಭಕ್ತಾಗ್ರೇಸರರಿಂದ ಸ್ಮರಿಸಲ್ಪಟ್ಟ ಯಾವ ದೇವಿಯು ತತ್‌ಕ್ಷಣದಲ್ಲಿ ನಮ್ಮ ಸರ್ವ ವಿಪತ್ತುಗಳನ್ನು ನಾಶಮಾಡುವಳೊ ಅಂತಹ ದೇವಿಯು ನಮ್ಮ ಸಂಕಟಗಳನ್ನು ನಾಶಮಾಡಿ ಕಲ್ಯಾಣವನ್ನು ಕೊಡಲಿ.

ಋಷಿರುವಾಚ :—

ಏವಂ ಸ್ತವಾಭಿಯುಕ್ತಾನಾಂ ದೇವಾನಾಂ ತತ್ರ ಪಾರ್ವತೀ ।
ಸ್ನಾತುಮಭ್ಯಾಯಯೌ ತೋಯೇ ಜಾಹ್ನವ್ಯಾ ನೃಪನನ್ದನ ॥೮೨॥

ಸಾಬ್ರವೀತ್ತಾನ್ ಸುರಾನ್ ಸುಭ್ರೂರ್ಭವದ್ಭಿಃ ಸ್ತೂಯತೇಽತ್ರ ಕಾ ।
ಶರೀರಕೋಶತಶ್ಚಾಸ್ಯಾಃ ಸಮುದ್ಭೂತಾಬ್ರವೀಚ್ಛಿವಾ ॥೮೩॥

ಸ್ತೋತ್ರಂ ಮಮೈತತ್ಕ್ರಿಯತೇ ಶುಮ್ಭದೈತ್ಯನಿರಾಕೃತೈಃ ।
ದೇವೈಃ ಸಮಸ್ತೈಃ ಸಮರೇ ನಿಶುಮ್ಭೇನ ಪರಾಜಿತೈಃ ॥೮೪॥

ಶರೀರಕೋಶಾದ್ಯತ್ತಸ್ಯಾಃ ಪಾರ್ವತ್ಯಾ ನಿಃಸೃತಾಮ್ಬಿಕಾ ।
ಕೌಶಿಕೀತಿ ಸಮಸ್ತೇಷು ತತೋ ಲೋಕೇಷು ಗೀಯತೇ ॥೮೫॥

---

ಸುಮೇಧ ಮುನಿಯು ಇಂತೆಂದನು :—

೮೨. ಎಲೈ ರಾಜನಂದನನಾದ ಸುರಥನೇ! ದೇವತೆಗಳು ಈ ರೀತಿಯಾಗಿ ದೇವಿಯ ಸ್ತುತಿಯಲ್ಲಿ ಆಸಕ್ತಿಯನ್ನು ಹೊಂದಿರಲು ಪಾರ್ವತಿಯು ಜಾಹ್ನವೀನದಿಯ ಜಲಪ್ರವಾಹದಲ್ಲಿ ಸ್ನಾನಮಾಡಲು ಬಂದು ದೇವತೆಗಳಿಗೆ ಕಾಣಿಸಿಕೊಂಡಳು.

೮೩. ಆಗ ಸುಂದರವಾದ ಹುಬ್ಬುಗಳಿಂದ ಶೋಭಿಸುವ ಪಾರ್ವತಿಯು ದೇವತೆಗಳನ್ನು ಕುರಿತು "ಈ ಹಿಮಾಚಲಪ್ರದೇಶದಲ್ಲಿ ನಿಮ್ಮಿಂದ ಸ್ತುತಿಸಲ್ಪಡು-ವವಳಾರು?" ಎಂದು ಪ್ರಶ್ನಿಸಿದಳು. ಅಷ್ಟರಲ್ಲಿ ಪಾರ್ವತಿಯ ಶರೀರಕೋಶದಿಂದ ಉದ್ಭವಿಸಿದ ಮಂಗಳಮೂರ್ತಿಯಾದ ದೇವಿಯು ಪಾರ್ವತಿಗೆ ಪ್ರತ್ಯುತ್ತರವನ್ನು ಹೇಳಿದಳು.

೮೪. ಶುಂಭಾಸುರನೆಂಬ ದೈತ್ಯರಾಜನಿಂದ ದೇವಲೋಕಭ್ರಷ್ಟರೂ, ನಿಶುಂಭಾಸುರನಿಂದ ಪರಾಜಯವನ್ನು ಹೊಂದಿದವರೂ ಆದ ಸಮಸ್ತ ದೇವತೆಗಳು ನನ್ನ ಸ್ತುತಿಯನ್ನು ಈಗ ಮಾಡುತ್ತಿರುವರು.

೮೫. ಹೀಗೆ ಪ್ರತ್ಯುತ್ತರವನ್ನು ಇತ್ತಿರುವ ಜಗನ್ಮಾತೆಯಾದ ದೇವಿಯು ಪಾರ್ವತಿಯ ಶರೀರಕೋಶದಿಂದ ಉದ್ಭವಿಸಿ ಬಂದವಳಾದುದರಿಂದ ಸರ್ವ ಪ್ರಪಂಚದಲ್ಲಿ "ಕೌಶಿಕೀ" ಎಂಬ ಯಥಾರ್ಥವಾದ ಹೆಸರಿನಿಂದ ಸ್ತುತಿಸ-ಲ್ಪಡುವಳು.

ತಸ್ಯಾಂ ವಿನಿರ್ಗತಾಯಾಂ ತು ಕೃಷ್ಣಾಭೂತ್ಸಾಪಿ ಪಾರ್ವತೀ ।
ಕಾಲಿಕೇತಿ ಸಮಾಖ್ಯಾತಾ ಹಿಮಾಚಲಕೃತಾಶ್ರಯಾ ॥೪೬॥

ತತೋಽಮ್ಬಿಕಾಂ ಪರಂ ರೂಪಂ ಬಿಭ್ರಾಣಾಂ ಸುಮನೋಹರಮ್ ।
ದದರ್ಶ ಚಣ್ಡೋ ಮುಣ್ಡಶ್ಚ ಭೃತ್ಯೌ ಶುಮ್ಭನಿಶುಮ್ಭಯೋಃ ॥೪೭॥

ತಾಭ್ಯಾಂ ಶುಮ್ಭಾಯ ಚಾಖ್ಯಾತಾ ಅತೀವ ಸುಮನೋಹರಾ ।
ಕಾಪ್ಯಾಸ್ತೇ ಸ್ತ್ರೀ ಮಹಾರಾಜ ಭಾಸಯನ್ತೀ ಹಿಮಾಚಲಮ್ ॥೪೮॥

ನೈವ ತಾದೃಕ್ ಕ್ವಚಿದ್ರೂಪಂ ದೃಷ್ಟಂ ಕೇನ ಚಿದುತ್ತಮಮ್ ।
ಜ್ಞಾಯತಾಂ ಕಾಪ್ಯಸೌ ದೇವೀ ಗೃಹ್ಯತಾಂ ಚಾಸುರೇಶ್ವರ ॥೪೯॥

---

೪೬. ಹೀಗೆ ಪಾರ್ವತಿಯ ದೇಹದಿಂದ ಅಂಬಿಕೆಯು ಹೊರಟುಬರಲಾಗಿ ಪಾರ್ವತಿಯ ಮೂರ್ತಿಯು ಕಪ್ಪಾಯಿತು. ಹಿಮಾಚಲದಲ್ಲಿ ವಾಸಮಾಡಿರುವ ಪಾರ್ವತಿಯು ಕಪ್ಪಾದುದರಿಂದ "ಕಾಲಿಕಾ" ಎಂದು ಕರೆಯಲ್ಪಟ್ಟಿರುವಳು.

೪೭. ತರುವಾಯ ನಿರುಪಮವಾದ ಮತ್ತು ರಮಣೀಯವಾದ ರೂಪವನ್ನು ಧರಿಸಿರುವ ಜಗನ್ಮಾತೆಯನ್ನು ಶುಂಭ-ನಿಶುಂಭ ಅಸುರರಿಗೆ ಭೃತ್ಯರಾಗಿರುವ ಚಂಡ-ಮುಂಡರೆಂಬ ಇಬ್ಬರು ಅಸುರರು ನೋಡಿದರು.

೪೮. ಕೂಡಲೆ ಚಂಡ-ಮುಂಡರಿಂದ ಶುಂಭ ಅಸುರನಿಗೆ ಹೀಗೆ ವಿಜ್ಞಾಪಿಸಲ್ಪಟ್ಟಿತು--ಮಹಾರಾಜನೇ! ಅತಿಯಾದ ಸೌಂದರ್ಯದಿಂದ ಕೂಡಿರುವವಳೂ, ಹಿಮಾಚಲವನ್ನು ತನ್ನ ಕಾಂತಿಯಿಂದ ಬೆಳಗುವವಳೂ ಆದ ಒಬ್ಬಳು ನಾರಿಯಿರುವಳು.

೪೯. ಅಸುರರಾಜನೇ! ಈ ಲೋಕದಲ್ಲಿ ಯಾರಿಂದಲೂ ಎಲ್ಲಿಯೂ ಅಂತಹ ಸರ್ವೋತ್ತಮವಾದ ರೂಪವು ನೋಡಲ್ಪಟ್ಟಿರುವುದಿಲ್ಲ. ಈ ದೇವಿಯು ಯಾರಿರಬಹುದೆಂದು ತಿಳಿಯೋಣಾಗಲಿ. ಮತ್ತು ಆಕೆಯು ನಿನ್ನಿಂದ ಪರಿಗ್ರಹಿಸಲ್ಪಡಲಿ.

ಸ್ತ್ರೀರತ್ನಮತಿಚಾರ್ವಙ್ಗೀ ದ್ಯೋತಯನ್ತೀ ದಿಶಸ್ತ್ವಿಷಾ ।
ಸಾ ತು ತಿಷ್ಠತಿ ದೈತ್ಯೇನ್ದ್ರ ತಾಂ ಭವಾನ್ ದ್ರಷ್ಟುಮರ್ಹತಿ ॥೫೦॥

ಯಾನಿ ರತ್ನಾನಿ ಮಣಯೋ ಗಜಾಶ್ವಾದೀನಿ ವೈ ಪ್ರಭೋ ।
ತ್ರೈಲೋಕ್ಯೇ ತು ಸಮಸ್ತಾನಿ ಸಾಮ್ಪ್ರತಂ ತಾನಿ ತೇ ಗೃಹೇ ॥೫೧॥

ಐರಾವತಃ ಸಮಾನೀತೋ ಗಜರತ್ನಂ ಪುರನ್ದರಾತ್ ।
ಪಾರಿಜಾತತರುಶ್ಚಾಯಂ ತಥೈವೋಚ್ಚೈಃಶ್ರವಾ ಹಯಃ ॥೫೨॥

ವಿಮಾನಂ ಹಂಸಸಂಯುಕ್ತಮೇತತ್ತಿಷ್ಠತಿ ತೇಽಙ್ಗಣೇ ।
ರತ್ನಭೂತಮಿಹಾನೀತಂ ಯದಾಸೀದ್ವೇಧಸೋಽದ್ಭುತಮ್ ॥೫೩॥

---

೫೦. ದೈತ್ಯರಾಜನೇ ! ಶುಂಭಾಸುರನೇ ! ಅಂತಹ ನಾರೀರತ್ನವು ಅತಿ ಸುಂದರವಾದ ಮೂರ್ತಿಯುಳ್ಳವಳೂ, ಶರೀರಕಾಂತಿಯಿಂದ ದಿಕ್ಕುಗಳನ್ನು ಬೆಳಗುವವಳೂ ಆಗಿ ಹಿಮಾಚಲದಲ್ಲಿರುವಳು. ನೀನು ಆ ನಾರೀಮಣಿಯನ್ನು ನೋಡಬೇಕು.

೫೧. ಅಸುರ ರಾಜನೇ ! ಮೂರು ಲೋಕಗಳಲ್ಲಿ ಪ್ರಶಸ್ತವಾದ ಆನೆ-ಕುದುರೆ ಮುಂತಾದ ರತ್ನಪ್ರಾಯವಾದ ವಸ್ತುವಾಗಲಿ, ಪದ್ಮರಾಗ ಮುಂತಾದ ಮಣಿರೂಪವಾದ ರತ್ನಗಳಾಗಲಿ ಎಲ್ಲವೂ ಈಗ ನಿನ್ನ ಮಂದಿರದಲ್ಲಿ ಬಂದು ಸೇರಿವೆಯಲ್ಲವೆ !

೫೨. ದೇವರಾಜನಾದ ಇಂದ್ರನಿಂದ ಅವನ ವಾಹನವಾದ ಐರಾವತ ಆನೆಯೂ, ಉಚ್ಚೈಃಶ್ರವ ಎಂಬ ಕುದುರೆಯೂ ಮತ್ತು ನಂದನವನದ ಅಲಂಕಾರ-ವಾದ ಪಾರಿಜಾತ ವೃಕ್ಷವೂ ನಿನ್ನಿಂದ ತರಲ್ಪಟ್ಟಿರುವುವು.

೫೩. ಹಂಸವಾಹನಗಳಿಂದ ಕೂಡಿದ ಆಶ್ಚರ್ಯಕರವಾದ ಮತ್ತು ರತ್ನಪ್ರಾಯವಾದ ಬ್ರಹ್ಮದೇವನ ಸಮೀಪದಲ್ಲಿದ್ದ ವಿಮಾನವು ನಿನ್ನಿಂದ ಇಲ್ಲಿಗೆ ತರಲ್ಪಟ್ಟು ಅದೀಗ ನಿನ್ನ ಮನೆಯ ಅಂಗಣದಲ್ಲಿರುವುದು.

ನಿಧಿರೇಷಮಹಾಪದ್ಮಃ ಸಮಾನೀತೋ ಧನೇಶ್ವರಾತ್ ।
ಕಿಞ್ಜಲ್ಕಿನೀಂ ದದೌ ಚಾಬ್ಧಿರ್ಮಾಲಾಮಮ್ಲಾನಪಙ್ಕಜಾಮ್ ॥೩೪॥

ಛತ್ರಂ ತೇ ವಾರುಣಂ ಗೇಹೇ ಕಾಞ್ಚನಸ್ರಾವಿ ತಿಷ್ಠತಿ ।
ತಥಾಯಂ ಸ್ಯನ್ದನವರೋ ಯಃ ಪುರಾಸೀತ್ಪ್ರಜಾಪತೇಃ ॥೩೫॥

ಮೃತ್ಯೋರುತ್ಕ್ರಾನ್ತಿದಾ ನಾಮ ಶಕ್ತಿರೀಶ ತ್ವಯಾ ಹೃತಾ ।
ಪಾಶಃ ಸಲಿಲರಾಜಸ್ಯ ಭ್ರಾತುಸ್ತವ ಪರಿಗ್ರಹೇ ॥೩೬॥

ನಿಶುಮ್ಭಸ್ಯಾಬ್ಧಿಜಾತಾಶ್ಚ ಸಮಸ್ತಾ ರತ್ನಜಾತಯಃ ।
ವಹ್ನಿಶ್ಚಾಪಿ ದದೌ ತುಭ್ಯಮಗ್ನಿಶೌಚೇ ಚ ವಾಸಸೀ ॥೩೭॥

---

೩೪. ಮತ್ತು ಕುಬೇರನ ಐಶ್ವರ್ಯಗಳಲ್ಲಿ ಒಂದಾದ ಮಹಾಪದ್ಮವೆಂಬ ಉತ್ತಮನಿಧಿಯು ಅವನಿಂದ ಕಿತ್ತು ಇಲ್ಲಿ ತರಲ್ಪಟ್ಟಿರುವುದು. ಹಾಗು ಸಮುದ್ರ-ರಾಜನು ಬಾಡದಿರುವ ಕಮಲಗಳಿಂದ ಸುಗಂಧವಾದ, ಕೇಸರಗಳಿಂದ ರಮ್ಯವಾದ ಮಾಲಿಕೆಯನ್ನು ನಿನಗೆ ಕೊಟ್ಟಿರುವನು.

೩೫. ವರುಣದೇವನಲ್ಲಿದ್ದ, ಸುವರ್ಣರಸವನ್ನು ಸುರಿಸಿ ಕಾಂತಿಪುಂಜ-ವನ್ನು ಚಲ್ಲುತ್ತಿರುವ ಶ್ವೇತಛತ್ರವು ನಿನ್ನ ಮನೆಯಲ್ಲಿರುವುದು. ಹಾಗು ಪ್ರಜಾ-ಪತಿದೇವನಲ್ಲಿದ್ದ ಶ್ರೇಷ್ಠವಾದ ಈ ರಥವು ನಿನ್ನ ಮನೆಯಲ್ಲಿರುವುದು.

೩೬. ಮಹಾಪ್ರಭುವೇ ! ಮೃತ್ಯುದೇವತೆಯ ಬಳಿಯಲ್ಲಿದ್ದ ಉತ್ಕ್ರಾಂ-ತಿಯನ್ನು ಕೊಡುವುದರಿಂದ ಉತ್ಕ್ರಾಂತಿದಾ ಎಂದು ಕರೆಯಲ್ಪಡುವ ಶಕ್ತಿ ಆಯುಧವು ನಿನ್ನಿಂದ ಅಪಹರಿಸಲ್ಪಟ್ಟಿದೆ. ಜಲದೇವತೆಯಾದ ವರುಣನ ಪಾಶಾಯುಧವು ನಿನ್ನ ಭ್ರಾತೃವಾದ ನಿಶುಂಭನ ಉಪಕರಣಗಳಲ್ಲಿ ಒಂದಾಗಿದೆ.

೩೭. ಸಮುದ್ರದಲ್ಲಿ ಬೆಳೆಯುವ ಎಲ್ಲವಿಧದ ರತ್ನರಾಶಿಗಳು ನಿನ್ನ ತಮ್ಮನಾದ ನಿಶುಂಭನ ಅಧೀನವಾಗಿವೆ. ಅಗ್ನಿದೇವನು ನಿನಗೆ ಅಗ್ನಿಸಂಸ್ಕಾರದಿಂದ ಶುಚಿಯಾದ ವಸ್ತ್ರಯುಗ್ಮವನ್ನು ತಂದುಕೊಟ್ಟಿರುವನು.

**ಏವಂ ದೈತ್ಯೇನ್ದ್ರ ರತ್ನಾನಿ ಸಮಸ್ತಾನ್ಯಾಹೃತಾನಿ ತೇ ।**
**ಸ್ತ್ರೀರತ್ನಮೇಷಾ ಕಲ್ಯಾಣೀ ತ್ವಯಾ ಕಸ್ಮಾನ್ನ ಗೃಹ್ಯತೇ ॥೫೮॥**

**ಋಷಿರುವಾಚ :—**

**ನಿಶಮ್ಯೇತಿ ವಚಃ ಶುಮ್ಭಃ ಸ ತದಾ ಚಣ್ಡಮುಣ್ಡಯೋಃ ।**
**ಪ್ರೇಷಯಾಮಾಸ ಸುಗ್ರೀವಂ ದೂತಂ ದೇವ್ಯಾ ಮಹಾಸುರಃ ॥೫೯॥**

**ಶುಮ್ಭ ಉವಾಚ :—**

**ಇತಿ ಚೇತಿ ಚ ವಕ್ತವ್ಯಾ ಸಾ ಗತ್ವಾ ವಚನಾನ್ಮಮ ।**
**ಯಥಾ ಚಾಭ್ಯೇತಿ ಸಂಪ್ರೀತ್ಯಾ ತಥಾ ಕಾರ್ಯಂ ತ್ವಯಾ ಲಘು॥೬೦॥**

**ಸ ತತ್ರ ಗತ್ವಾ ಯತ್ರಾಸ್ತೇ ಶೈಲೋದ್ದೇಶೇಽತಿಶೋಭನೇ ।**
**ತಾಂ ಚ ದೇವೀಂ ತತಃ ಪ್ರಾಹ ಶ್ಲಕ್ಷ್ಣಂ ಮಧುರಯಾ ಗಿರಾ ॥೬೧॥**

---

೫೮. ದೈತ್ಯರಾಜನೇ ! ಹೀಗೆ ಎಲ್ಲೆಡೆಗಳಿಂದಲೂ ರತ್ನವಸ್ತುಗಳು ನಿನ್ನಿಂದ ತರಲ್ಪಟ್ಟಿರುವುವು. ಹೀಗಿರಲು ಮಂಗಳಮೂರ್ತಿಯಾಗಿರುವ ಈ ನಾರೀರತ್ನವು ಮಾತ್ರ ನಿನ್ನಿಂದ ಏಕೆ ತರಲ್ಪಡಬಾರದು ?

ಸುಮೇಧ ಮುನಿಯು ಹೇಳಿದನು :—

೫೯. ಮಹಾಸುರನಾದ ಶುಂಭನು ಚಂಡ-ಮುಂಡರೆಂಬ ದೂತರ ಮಾತನ್ನು ಕೇಳಿ ಅದರಂತೆ ನಾರೀರತ್ನವನ್ನು ವಶಪಡಿಸಿಕೊಳ್ಳಬೇಕೆಂಬ ಸಂಕಲ್ಪದಿಂದ ದೇವಿಯಬಳಿಗೆ ಸುಗ್ರೀವನೆಂಬ ದೂತನನ್ನು ಕಳುಹಿಸಿದನು.

ಶುಂಭಾಸುರನು ಹೀಗೆಂದನು :—

೬೦. ಎಲೈ, ಸುಗ್ರೀವನೇ ! ನೀನು ಆ ನಾರಿಯಬಳಿಗೆ ಹೋಗಿ ನನ್ನ ಅಪ್ಪಣೆಯಂತೆ ಹೀಗೆ ಹೀಗೆ ಮಾತನಾಡಬೇಕು. ನಿನ್ನ ಮಾತನ್ನು ಕೇಳಿ ಆಕೆಯು ಪ್ರೀತಿಯಿಂದ ನನ್ನ ಸಮೀಪಕ್ಕೆ ಬರುವಹಾಗೆ ನೀನು ಬೇಗ ಯತ್ನವನ್ನು ಮಾಡಬೇಕು.

೬೧. ತರುವಾಯ ದೂತನು ದೇವಿಯು ಇದ್ದ ಬಲು ಶೋಭಾಯಮಾನವಾದ ಹಿಮಾಲಯದ ಪ್ರದೇಶಕ್ಕೆ ಹೋಗಿ ಆ ದೇವಿಯನ್ನು ಕುರಿತು ಮಧುರವಾದ ಮಾತುಗಳಿಂದ ನಯವಾಗಿ ಹೇಳಿದನು.

ದೂತ ಉವಾಚ :—

ದೇವಿ ದೈತ್ಯೇಶ್ವರಃ ಶುಮ್ಭಸ್ತ್ರೈಲೋಕ್ಯೇ ಪರಮೇಶ್ವರಃ ।
ದೂತೋಽಹಂ ಪ್ರೇಷಿತಸ್ತೇನ ತ್ವತ್ಸಕಾಶಮಿಹಾಗತಃ ॥೬೨॥

ಅವ್ಯಾಹತಾಜ್ಞಃ ಸರ್ವಾಸು ಯಃ ಸದಾ ದೇವಯೋನಿಷು ।
ನಿರ್ಜಿತಾಖಿಲದೈತ್ಯಾರಿಃ ಸ ಯದಾಹ ಶೃಣುಷ್ವ ತತ್ ॥೬೩॥

ಮಮ ತ್ರೈಲೋಕ್ಯಮಖಿಲಂ ಮಮ ದೇವಾ ವಶಾನುಗಾಃ ।
ಯಜ್ಞಭಾಗಾನಹಂ ಸರ್ವಾನುಪಾಶ್ನಾಮಿ ಪೃಥಕ್ ಪೃಥಕ್ ॥೬೪॥

ತ್ರೈಲೋಕ್ಯೇ ವರರತ್ನಾನಿ ಮಮ ವಶ್ಯಾನ್ಯಶೇಷತಃ ।
ತಥೈವ ಗಜರತ್ನಂ ಚ ಹೃತಂ ದೇವೇನ್ದ್ರವಾಹನಮ್ ॥೬೫॥

---

ದೂತನು ಇಂತೆಂದನು :—

೬೨. ದೇವಿಯೇ! ದೈತ್ಯೇಶ್ವರನಾದ ಶುಂಭಾಸುರನು ಮೂರು ಲೋಕಗಳಿಗೆ ನಿರಂಕುಶನಾದ ಪ್ರಭುವಾಗಿರುವನು. ನಾನು ಆ ಪ್ರಭುವಿನ ದೂತನಾಗಿರುವೆನು. ಅವನ ಅಪ್ಪಣೆಯಂತೆ ನಾನು ನಿನ್ನಬಳಿಗೆ ಬಂದಿರುವೆನು.

೬೩. ಯಾವ ನನ್ನ ಪ್ರಭುವು ಸರ್ವಕಾಲದಲ್ಲಿಯೂ ಸಮಸ್ತ ದೇವ-ಜಾತಿಯಲ್ಲಿ ಅಕುಂಠಿತವಾದ ಆಜ್ಞಾಪ್ರಸಾರವುಳ್ಳವನೂ, ಮತ್ತು ಸೋಲಿಸಿದ ಸಮಸ್ತ ದೈತ್ಯಶತ್ರುಗಳುಳ್ಳವನೂ ಆಗಿದ್ದಾನೆಯೊ. ಅವನು ಹೇಳಿಕಳುಹಿಸಿದ ಸಂದೇಶವನ್ನು ಕೇಳು.

೬೪. ಮೂರು ಲೋಕಗಳು ಈಗ ನನ್ನದಾಗಿವೆ. ಎಲ್ಲ ದೇವತೆಗಳು ನನಗೆ ವಶರಾಗಿರುವರು. ಅಲ್ಲಲ್ಲಿ ನಡೆಯುವ ಸಮಸ್ತ ಯಜ್ಞಕರ್ಮಗಳಲ್ಲಿ ಅರ್ಪಿಸುವ ಹವಿರ್ಭಾಗಗಳನ್ನು ಪ್ರತ್ಯೇಕಪ್ರತ್ಯೇಕವಾಗಿ ನಾನು ಭುಂಜಿಸುವೆನು.

೬೫. ಮತ್ತು ಮೂರು ಲೋಕಗಳಲ್ಲಿರುವ ಉತ್ತಮೋತ್ತಮ ವಸ್ತು-ಗಳೆಲ್ಲವೂ ನನಗೆ ವಶವಾಗಿವೆ. ಹಾಗು ದೇವೇಂದ್ರನ ವಾಹನವೂ ಗಜರತ್ನವೂ ಆದ ಐರಾವತವು ನನ್ನಿಂದ ವಶದಲ್ಲಿ ಇರಿಸಲ್ಪಟ್ಟಿರುವುದು.

**ಕ್ಷೀರೋದಮಥನೋದ್ಭೂತಮಶ್ವರತ್ನಂ ಮಮಾಮರೈಃ ।**
**ಉಚ್ಚೈಃಶ್ರವಸಸಂಜ್ಞಂ ತು ಪ್ರಣಿಪತ್ಯ ಸಮರ್ಪಿತಮ್ ॥೬೬॥**

**ಯಾನಿ ಚಾನ್ಯಾನಿ ದೇವೇಷು ಗನ್ಧರ್ವೇಷೂರಗೇಷು ಚ ।**
**ರತ್ನಭೂತಾನಿ ಭೂತಾನಿ ತಾನಿ ಮಯ್ಯೇವ ಶೋಭನೇ ॥೬೭॥**

**ಸ್ತ್ರೀರತ್ನಭೂತಾಂ ತ್ವಾಂ ದೇವಿ ಲೋಕೇ ಮನ್ಯಾಮಹೇ ವಯಮ್ ।**
**ಸಾ ತ್ವಮಸ್ಮಾನುಪಾಗಚ್ಛ ಯತೋ ರತ್ನಭುಜೋ ವಯಮ್ ॥೬೮॥**

**ಮಾಂ ವಾ ಮಮಾನುಜಂ ವಾಪಿ ನಿಶುಮ್ಭಮುರುವಿಕ್ರಮಮ್ ।**
**ಭಜ ತ್ವಂ ಚಞ್ಚಲಾಪಾಙ್ಗಿ ರತ್ನಭೂತಾಸಿ ವೈ ಯತಃ ॥೬೯॥**

---

೬೬. ಕ್ಷೀರಸಮುದ್ರದ ಮಥನದಿಂದ ಹುಟ್ಟಿದ, ಉಚ್ಚೈಃಶ್ರವ ಎಂಬ ನಾಮಾಂಕಿತವಾದ ಅಶ್ವರತ್ನವು ದೇವತೆಗಳಿಂದ ನಮಸ್ಕಾರಪೂರ್ವಕವಾಗಿ ನನಗೆ ಅರ್ಪಿಸಲ್ಪಟ್ಟಿರುವುದು.

೬೭. ಮಂಗಳಾಂಗಿಯೇ! ಹಾಗು ದೇವತೆ, ಗಂಧರ್ವ, ನಾಗ ಮುಂತಾದವರಲ್ಲಿ ಇನ್ನು ಯಾವ ಯಾವ ಅಮೂಲ್ಯವಾದ ರತ್ನವಸ್ತುಗಳಿವೆಯೊ ಅವೆಲ್ಲವೂ ಜಗದೇಕವೀರನಾದ ನನ್ನಲ್ಲಿಯೇ ಇರುವುವು.

೬೮. ಎಲೈ, ದೇವಿಯೇ! ನಾವು ನಿನ್ನನ್ನು ಲೋಕವಲ್ಲೆಲ್ಲ ನಾರೀ-ರತ್ನವೆಂದು ಅರಿತಿರುವೆವು. ಹಾಗೆ ನಾರೀರತ್ನವಾದ ನೀನು ನಮ್ಮ ಬಳಿಗೆ ಬರಬೇಕು. ನಾವು ರತ್ನವಸ್ತುಗಳ ಭೋಗವನ್ನು ಅನುಭವಿಸುವವರಾಗಿದ್ದೇವೆ.

೬೯. ಚಂಚಲವಾದ ಕಡೆಗಣ್ಣಿನ ನೋಟವುಳ್ಳವಳೇ! ನೀನು ರತ್ನರೂಪಳಾಗಿರುವುದರಿಂದ ರತ್ನವಸ್ತುಭೋಗಕ್ಕೆ ಅರ್ಹರಾದ ನನ್ನನ್ನು ಅಥವಾ ಹೆಚ್ಚಾದ ವಿಕ್ರಮದಿಂದ ಖ್ಯಾತಿಯನ್ನು ಪಡೆದ ನನ್ನ ತಮ್ಮನಾದ ನಿಶುಂಭನನ್ನು ಸೇವಿಸುವವಳಾಗು,

ಪರಮೈಶ್ವರ್ಯಮತುಲಂ ಪ್ರಾಪ್ಸ್ಯಸೇ ಮತ್ಪರಿಗ್ರಹಾತ್ ।
ಏತದ್ಬುದ್ಧ್ಯಾ ಸಮಾಲೋಚ್ಯ ಮತ್ಪರಿಗ್ರಹತಾಂ ವ್ರಜ ॥೭೦॥

ಋಷಿರುವಾಚ :—

ಇತ್ಯುಕ್ತಾ ಸಾ ತದಾ ದೇವೀ ಗಮ್ಭೀರಾನ್ತಃಸ್ಮಿತಾ ಜಗೌ ।
ದುರ್ಗಾ ಭಗವತೀ ಭದ್ರಾ ಯಯೇದಂ ಧಾರ್ಯತೇ ಜಗತ್ ॥೭೧॥

ಸತ್ಯಮುಕ್ತಂ ತ್ವಯಾ ನಾತ್ರ ಮಿಥ್ಯಾ ಕಿಂಚಿತ್ತ್ವಯೋದಿತಮ್ ।
ತ್ರೈಲೋಕ್ಯಾಧಿಪತಿಃ ಶುಮ್ಭೋ ನಿಶುಮ್ಭಶ್ಚಾಪಿ ತಾದೃಶಃ ॥೭೨॥

ಕಿಂ ತ್ವತ್ರ ಯತ್ಪ್ರತಿಜ್ಞಾತಂ ಮಿಥ್ಯಾ ತತ್ಕ್ರಿಯತೇ ಕಥಮ್ ।
ಶ್ರೂಯತಾಮಲ್ಪಬುದ್ಧಿತ್ವಾತ್ಪ್ರತಿಜ್ಞಾ ಯಾ ಕೃತಾ ಪುರಾ ॥೭೩॥

---

೭೦. ನಾರೀಮಣಿಯೇ ! ಶುಂಭಾಸುರನಲ್ಲಿ ಪತ್ನಿಯಾಗಿ ಸೇರುವುದರಿಂದ ಅವನಲ್ಲಿರುವ ಅಖಂಡೈಶ್ವರ್ಯಕ್ಕೆ ನೀನು ಪ್ರಭುವಾದ ರಾಣಿಯಾಗುತ್ತೀಯೆ. ಇದನ್ನು ವಿವೇಕದಿಂದ ಆಲೋಚಿಸಿ ದೈತ್ಯರಾಜನಾದ ನನ್ನ ರಾಜ್ಞೀಪಟ್ಟವನ್ನು ಅಂಗೀಕರಿಸು.

ಋಷಿಯು ಹೀಗೆ ಹೇಳಿದನು :—

೭೧. ಅಖಂಡೈಶ್ವರ್ಯದಿಂದ ರಾಜಿತಳೂ ದುರ್ಗವನ್ನು ಪರಿಹರಿಸುವವಳೂ ಮಂಗಳಕರಳೂ ಮತ್ತು ಪ್ರಪಂಚವನ್ನು ಧರಿಸಿರುವವಳೂ ಆದ ದೇವಿಯು ಶುಂಭಾಸುರನ ದೂತನಿಂದ ಈ ವಿಧವಾಗಿ ಹೇಳಲ್ಪಟ್ಟಳು. ಆಗ ದೇವಿಯು ಗಂಭೀರವಾದ ನಗುಮುಖವುಳ್ಳವಳಾಗಿ ಹೇಳಿದಳು.

೭೨. ದೂತನೇ ! ಶುಂಭಾಸುರನ ವಿಷಯದಲ್ಲಿ ನಿಜವನ್ನು ಹೇಳಿದ್ದೀಯೆ! ನೀನು ಆ ವಿಷಯದಲ್ಲಿ ಒಂದಾದರೂ ಸುಳ್ಳನ್ನು ಹೇಳಲಿಲ್ಲ. ಶುಂಭಾಸುರನು ತ್ರೈಲೋಕ್ಯಕ್ಕೆ ಅಧಿಪತಿಯಾಗಿರುವನೆಂಬುದು ನಿಜವು. ಹಾಗು ನಿಶುಂಭಾಸುರನೂ ಅಂತೆಯೇ ಇರುವನು.

೭೩. ಆದರೆ ನಾನು ಒಬ್ಬ ಪುರುಷನಲ್ಲಿ ಪತ್ನೀಭಾವವನ್ನು ಹೊಂದಿರುವ ವಿಷಯದಲ್ಲಿ ಏನು ಪ್ರತಿಜ್ಞೆ ಮಾಡಿರುವೆನೊ ಆ ಪ್ರತಿಜ್ಞೆಯನ್ನು ಹೇಗೆ ಸುಳ್ಳಾಗಿಮಾಡಲಿ. ಬುದ್ಧಿವಿಕಾಸವಿಲ್ಲದ್ದರಿಂದ ಹಿಂದೆ ನಾನು ಮಾಡಿಕೊಂಡಿರುವ ಪ್ರತಿಜ್ಞೆಯನ್ನು ನಿನಗೆ ಹೇಳುವೆನು, ಕೇಳು.

ಯೋ ಮಾಂ ಜಯತಿ ಸಙ್ಗ್ರಾಮೇ ಯೋ ಮೇ ದರ್ಪಂ ವ್ಯಪೋಹತಿ।
ಯೋ ಮೇ ಪ್ರತಿಬಲೋ ಲೋಕೇ ಸ ಮೇ ಭರ್ತಾ ಭವಿಷ್ಯತಿ ॥೭೪॥

ತದಾಗಚ್ಛತು ಶುಮ್ಭೋಽತ್ರ ನಿಶುಮ್ಭೋ ವಾ ಮಹಾಸುರಃ।
ಮಾಂ ಜಿತ್ವಾ ಕಿಂ ಚಿರೇಣಾತ್ರ ಪಾಣಿಂ ಗೃಹ್ಣಾತು ಮೇ ಲಘು ॥೭೫॥

ದೂತ ಉವಾಚ :—

ಅವಲಿಪ್ತಾಸಿ ಮೈವಂ ತ್ವಂ ದೇವಿ ಬ್ರೂಹಿ ಮಮಾಗ್ರತಃ।
ತ್ರೈಲೋಕ್ಯೇ ಕಃ ಪುಮಾಂಸ್ತಿಷ್ಠೇದಗ್ರೇ ಶುಮ್ಭನಿಶುಮ್ಭಯೋಃ ॥೭೬॥

ಅನ್ಯೇಷಾಮಪಿ ದೈತ್ಯಾನಾಂ ಸರ್ವೇ ದೇವಾ ನ ವೈ ಯುಧಿ।
ತಿಷ್ಠನ್ತಿ ಸಮ್ಮುಖಂ ದೇವಿ ಕಿಂ ಪುನಃ ಸ್ತ್ರೀ ತ್ವಮೇಕಿಕಾ ॥೭೭॥

---

೭೪. ಯಾವ ಪುರುಷನು ಸಂಗ್ರಾಮದಲ್ಲಿ ನನ್ನನ್ನು ಜಯಿಸುವನೋ; ಯಾವನು ನನ್ನ ವೀರ್ಯದರ್ಪವನ್ನು ಅಡಗಿಸುವನೋ, ಮತ್ತು ಯಾವನು ನನಗೆ ಅನುರೂಪನಾದ ಪ್ರತಿಪಕ್ಷನಾಗುವನೋ ಅಂತಹವನು ನನಗೆ ಪತಿಯಾಗಬೇಕು.

೭೫. ಹೀಗೆ ನಾನು ಪ್ರತಿಜ್ಞೆಯನ್ನು ಮಾಡಿಕೊಂಡಿರುವುದರಿಂದ ಶುಂಭಾಸುರನೊ ಅಥವಾ ನಿಶುಂಭಾಸುರನೋ ಇಲ್ಲಿಗೆ ಬರಲಿ. ವಿಳಂಬವೇಕೆ? ಯಾರಾದರೊಬ್ಬರು ಬಂದು ನನ್ನನ್ನು ಜಯಿಸಿ ಬೇಗ ನನ್ನ ಪಾಣಿಯನ್ನು ಗ್ರಹಿಸಲಿ.

ದೂತನು ಇಂತೆಂದನು :—

೭೬. ಎಲೈ, ದೇವಿಯೇ! ಬಲು ಅಹಂಕಾರವುಳ್ಳವಳಾಗಿದ್ದೀಯೆ. ನೀನು ಹೀಗೆಲ್ಲ ನನ್ನ ಎದುರಿನಲ್ಲಿ ಹೇಳಬೇಡ. ಮೂರು ಲೋಕಗಳಲ್ಲೆಲ್ಲ ಯಾವ ಪುರುಷನು ತಾನೆ ಶುಂಭ-ನಿಶುಂಭಾಸುರರ ಎದುರಿನಲ್ಲಿ ಸ್ಪರ್ಧೆಯಿಂದ ನಿಲ್ಲಬಲ್ಲನು.

೭೭. ಸಮಸ್ತ ದೇವತೆಗಳು ಶುಂಭಾಸುರನ ಕಡೆಯ ಇತರ ದೈತ್ಯ-ರೊಡನೆ ಯುದ್ಧಮಾಡಲು ಅವರ ಎದುರಿನಲ್ಲಿ ಕೂಡ ನಿಲ್ಲಲಾರರು. ಹೀಗಿರಲು ಏಕಾಕಿನಿಯೂ ಅನಾಥೆಯೂ ಆಗಿರುವ ಸ್ತ್ರೀಯಾದ ನಿನ್ನ ಪಾಡೇನು?

ಇನ್ದ್ರಾದ್ಯಾಃ ಸಕಲಾ ದೇವಾಸ್ತಸ್ಥುರ್ಯೇಷಾಂ ನ ಸಂಯುಗೇ ।
ಶುಮ್ಭಾದೀನಾಂ ಕಥಂ ತೇಷಾಂ ಸ್ತ್ರೀ ಪ್ರಯಾಸ್ಯಸಿ ಸಮ್ಮುಖಮ್
॥೭೮॥

ಸಾ ತ್ವಂ ಗಚ್ಛ ಮಯೈವೋಕ್ತಾ ಪಾರ್ಶ್ವಂ ಶುಮ್ಭನಿಶುಮ್ಭಯೋಃ ।
ಕೇಶಾಕರ್ಷಣನಿರ್ಧೂತಗೌರವಾ ಮಾ ಗಮಿಷ್ಯಸಿ ॥೭೯॥

ಶ್ರೀ ದೇವ್ಯುವಾಚ :—

ಏವಮೇತದ್ಬಲೀ ಶುಮ್ಭೋ ನಿಶುಮ್ಭಶ್ಚಾತಿವೀರ್ಯವಾನ್ ।
ಕಿಂ ಕರೋಮಿ ಪ್ರತಿಜ್ಞಾ ಮೇ ಯದನಾಲೋಚಿತಾ ಪುರಾ ॥೮೦॥

---

೭೮. ಶುಂಭಾಸುರ ಮುಂತಾದ ವೀರ ರಾಕ್ಷಸರ ಮುಂದೆ ಯುದ್ಧಕ್ಕೆ ಇಂದ್ರನು ಮೊದಲಾದ ಸಮಸ್ತ ದೇವತೆಗಳು ನಿಲ್ಲಲಾರದವರಾದರು. ಅಬಲೆಯಾದ ನೀನು ಅವರ ಸಂಮುಖದಲ್ಲಿ ಯುದ್ಧಕ್ಕೆ ನಿಲ್ಲುತ್ತೀಯಾ ?

೭೯. ಹೀಗೆಲ್ಲ ನಡೆಯದಿರುವ ಪ್ರತಿಜ್ಞೆಯನ್ನು ಕೈಗೊಂಡಿರುವ ನೀನು ನನ್ನ ಮಾತಿನಂತೆ ಶುಂಭ-ನಿಶುಂಭ ದೈತ್ಯರ ಬಳಿಗೆ ಹೋಗಿ ಸೇರು. ನನ್ನ ಉಪದೇಶವನ್ನು ನೀನು ಅಂಗೀಕರಿಸಿದರೆ ಮುಡಿಹಿಡಿದೆಳೆಸಿಕೊಳ್ಳುವುದರಿಂದ ಗೌರವವನ್ನು ಕಳೆದುಕೊಂಡು ಹೋದಂತೆ ಆಗುವುದಿಲ್ಲ.

ದೇವಿಯು ಮತ್ತೆ ಹೀಗೆಂದಳು :—

೮೦. ದೂತನೇ ! ನಿನ್ನ ಮಾತು ಒಪ್ಪುವಂತಹುದು. ಶುಂಭಾಸುರನು ಬಲಿಷ್ಠನಹುದು. ನಿಶುಂಭಾಸುರನು ಹಾಗೆಯೆ ಅತಿವೀರ್ಯವಂತನು ನಿಜ. ನಾನೇನು ಮಾಡಲಿ. ಹಿಂದೆ ನಾನು ಇದನ್ನೆಲ್ಲ ಯೋಚಿಸದೆ ಪ್ರತಿಜ್ಞೆಯನ್ನು ಕೈಗೊಂಡೆನಲ್ಲ.

**ಸ ತ್ವಂ ಗಚ್ಛ ಮಯೋಕ್ತಂ ತೇ ಯದೇತತ್ಸರ್ವಮಾದೃತಃ ।**
**ತದಾಚಕ್ಷ್ವ ಸುರೇನ್ದ್ರಾಯ ಸ ಚ ಯುಕ್ತಂ ಕರೋತು ತತ್ ॥೮೧॥**

**ಇತಿ ಶ್ರೀ ಮಾರ್ಕಣ್ಡೇಯ ಮಹಾಪುರಾಣೇ ದೇವೀಮಾಹಾತ್ಮ್ಯೇ**
**ದ್ವ್ಯಶೀತಿತಮೋಽಧ್ಯಾಯಃ**

---

೮೧. ಆದ್ದರಿಂದ ಈಗ ದೂತನ ಕೆಲಸವನ್ನು ನಿರ್ವಹಿಸಿದ ನೀನು ಇಲ್ಲಿಂದ ಹೊರಡು. ನಾನು ಹೇಳಿದುದನ್ನೆಲ್ಲ ಆದರದಿಂದ ಅಸುರೇಂದ್ರನಾದ ಶುಂಭಾಸುರನಿಗೆ ಹೇಳು. ಮುಂದೆ ಯುಕ್ತತೋರಿದುದನ್ನು ಅಸುರರಾಜನು ಮಾಡಲಿ.

ಮಾರ್ಕಂಡೇಯ ಮಹಾಪುರಾಣದಲ್ಲಿ ಎಂಭತ್ತೆರಡನೆಯ ಅಧ್ಯಾಯವು
ಮುಗಿದುದು.



|| ಓಂ ಶ್ರೀ ದುರ್ಗಾಯೈ ನಮಃ ||

# ಮಾರ್ಕಂಡೇಯ ಪುರಾಣಂ



## ತ್ರ್ಯಶೀತಿತಮೋಽಧ್ಯಾಯಃ

### (ಧೂಮ್ರಲೋಚನವಧಃ)

**ಋಷಿರುವಾಚ :—**

**ಇತ್ಯಾಕರ್ಣ್ಯ ವಚೋ ದೇವ್ಯಾಃ ಸ ದೂತೋಽಮರ್ಷಪೂರಿತಃ ।**
**ಸಮಾಚಷ್ಟ ಸಮಾಗಮ್ಯ ದೈತ್ಯರಾಜಾಯ ವಿಸ್ತರಾತ್ ॥೧॥**

**ತಸ್ಯ ದೂತಸ್ಯ ತದ್ವಾಕ್ಯಮಾಕರ್ಣ್ಯಾಸುರರಾಟ್ತತಃ ।**
**ಸಕ್ರೋಧಃ ಪ್ರಾಹ ದೈತ್ಯಾನಾಮಧಿಪಂ ಧೂಮ್ರಲೋಚನಮ್ ॥೨॥**

---

## ಎಂಭತ್ತಮೂರನೆಯ ಅಧ್ಯಾಯ

ಋಷಿಯು ಹೇಳಿದನು :—

೧. ಸುಗ್ರೀವನೆಂಬ ಆ 'ದೂತನು ದೇವಿಯು ಆಡಿದ ಈ ಮಾತನ್ನು ಕೇಳಿ ತಾನೇ ಅಸಹನೆ-ಕೋಪಗಳ ಆವೇಶಹೊಂದಿದವನಾಗಿ ಹಿಂದಕ್ಕೆ ಬಂದು ಅಸುರರಾಜನಿಗೆ ವಿಸ್ತಾರವಾಗಿ ಎಲ್ಲವನ್ನೂ ನಿವೇದಿಸಿದನು.

೨. ತರುವಾಯ ದೈತ್ಯರಾಜನಾದ ಶುಂಭಾಸುರನು ಆ ದೂತನ ಎಲ್ಲ ಮಾತನ್ನು ಕೇಳಿ ಕೋಪಾವೇಶವುಳ್ಳವನಾಗಿ ಅನೇಕ ದೈತ್ಯಗಣಕ್ಕೆ ಪ್ರಭುವಾದ ಧೂಮ್ರಲೋಚನನೆಂಬ ಅಸುರನಿಗೆ ಹೇಳಿದನು.

ಹೇ ಧೂಮ್ರಲೋಚನಾಶು ತ್ವಂ ಸ್ವಸೈನ್ಯಪರಿವಾರಿತಃ ।
ತಾಮಾನಯ ಬಲಾದ್ದುಷ್ಟಾಂ ಕೇಶಾಕರ್ಷಣವಿಹ್ವಲಾಮ್ ॥೩॥

ತತ್ಪರಿತ್ರಾಣದಃ ಕಶ್ಚಿದ್ಯದಿ ವೋತ್ತಿಷ್ಠತೇ ಪರಃ ।
ಸ ಹನ್ತವ್ಯೋಽಮರೋ ವಾಪಿ ಯಕ್ಷೋ ಗನ್ಧರ್ವ ಏವ ವಾ ॥೪॥

ಋಷಿರುವಾಚ :—

ತೇನಾಜ್ಞಪ್ತಸ್ತತಃ ಶೀಘ್ರಂ ಸ ದೈತ್ಯೋ ಧೂಮ್ರಲೋಚನಃ ।
ವೃತಃ ಷಷ್ಟ್ಯಾ ಸಹಸ್ರಾಣಾಮಸುರಾಣಾಂ ದ್ರುತಂ ಯಯೌ ॥೫॥

ಸ ದೃಷ್ಟ್ವಾ ತಾಂ ತತೋ ದೇವೀಂ ತುಹಿನಾಚಲಸಂಸ್ಥಿತಾಮ್ ।
ಜಗಾದೋಚ್ಚೈಃ ಪ್ರಯಾಹೀತಿ ಮೂಲಂ ಶುಮ್ಭನಿಶುಮ್ಭಯೋಃ ॥೬॥

---

೩. ಎಲೈ, ಧೂಮ್ರಲೋಚನನೇ! ನೀನು ನಿನ್ನ ಸೈನ್ಯಪರಿವಾರದಿಂದ ಕೂಡಿ ಆ ದುಷ್ಟಳಾದ ನಾರಿಯನ್ನು ಮುಡಿಹಿಡಿದೆಳೆದುಕೊಂಡು ಅಗೌರವಪಡಿಸುತ್ತ ಬೇಗ ಇಲ್ಲಿಗೆ ಕರೆದುಕೊಂಡು ಬಾ.

೪. ನೀನು ಆಕೆಯನ್ನು ಬಲಾತ್ಕಾರದಿಂದ ಎಳೆದು ತರುವಾಗ ಅವಳ ರಕ್ಷಣೆಗಾಗಿ ಬೇರೊಬ್ಬನು ಒಂದು ವೇಳೆ ಎದ್ದು ಬಂದರೆ ಅವನು ಅಮರ, ಯಕ್ಷ, ಗಂಧರ್ವ ಯಾರಾಗಿದ್ದರೂ ಅವನನ್ನು ಅಲ್ಲಿಯೆ ವಧಿಸತಕ್ಕದ್ದು.

ಋಷಿಯು ಹೀಗೆಂದನು :—

೫. ತರುವಾಯ ಶುಂಭಾಸುರನಿಂದ ಆಜ್ಞಾಪಿಸಲ್ಪಟ್ಟು ಧೂಮ್ರಲೋಚನನೆಂಬ ದೈತ್ಯನು ಅರವತ್ತು ಸಹಸ್ರ ಸಂಖ್ಯೆಯ ರಾಕ್ಷಸ ಸೈನ್ಯ ಪರಿವಾರದೊಡನೆ ಬೇಗ ದೇವಿಯ ಬಳಿಗೆ ಹೋದನು.

೬. ಅನಂತರದಲ್ಲಿ ಧೂಮ್ರಲೋಚನಾಸುರನು ಹಿಮಾಚಲದ ಪ್ರಾಂತದಲ್ಲಿದ್ದ ಆ ದೇವಿಯನ್ನು ನೋಡಿ "ಶುಂಭ-ನಿಶುಂಭ ಅಸುರರ ಪಾದದಡಿಗೆ ಬೇಗ ನಡೆ" ಎಂದು ಗಟ್ಟಿಯಾಗಿ ಗರ್ಜಿಸಿ ಹೇಳಿದನು.

**ನ ಚೇತ್ಪ್ರೀತ್ಯಾದ್ಯ ಭವತೀ ಮದ್ಭರ್ತಾರಮುಪೈಷ್ಯತಿ ।**
**ತತೋ ಬಲಾನ್ನಯಾಮ್ಯೇಷ ಕೇಶಾಕರ್ಷಣವಿಹ್ವಲಾಮ್ ॥೭॥**

**ಶ್ರೀ ದೇವ್ಯುವಾಚ :—**

**ದೈತ್ಯೇಶ್ವರೇಣ ಪ್ರಹಿತೋ ಬಲವಾನ್ ಬಲಸಂಯುತಃ ।**
**ಬಲಾನ್ನಯಸಿ ಮಾಮೇವಂ ತತಃ ಕಿಂ ತೇ ಕರೋಮ್ಯಹಮ್ ॥೮॥**

**ಋಷಿರುವಾಚ :—**

**ಇತ್ಯುಕ್ತಃ ಸೋಽಭ್ಯಧಾವತ್ತಾಮಸುರೋ ಧೂಮ್ರಲೋಚನಃ ।**
**ಹುಙ್ಕಾರೇಣೈವ ತಂ ಭಸ್ಮ ಸಾಚ್ಚಕಾರಾಮ್ಬಿಕಾ ತತಃ ॥೯॥**

**ಅಥ ಕ್ರುದ್ಧಂ ಮಹಾಸೈನ್ಯಮಸುರಾಣಾಂ ತಥಾಮ್ಬಿಕಾ ।**
**ವವರ್ಷ ಸಾಯಕೈಸ್ತೀಕ್ಷ್ಣೈಸ್ತಥಾ ಶಕ್ತಿಪರಶ್ವಧೈಃ ॥೧೦॥**

---

೭. ನೀನು ನನ್ನ ಸ್ವಾಮಿಯ ಬಳಿಗೆ ಈಗ ಪ್ರೇಮದಿಂದ ಹೋಗಿ ಸೇರದಿದ್ದರೆ ಆಗ ನಾನು ಬಲಾತ್ಕಾರದಿಂದ ಕೂದಲನ್ನು ಹಿಡಿದು ಎಳೆದು ಅವಮಾನಪೂರ್ವಕವಾಗಿ ಕರೆದೊಯ್ಯುವೆನು.

ದೇವಿಯು ಇಂತೆಂದಳು :—

೮. ದೈತ್ಯರಾಜನಿಂದ ಕಳುಹಿಸಲ್ಪಟ್ಟವನು ನೀನು. ಮತ್ತು ಬಲಿಷ್ಠನೂ ಸೈನ್ಯಪರಿವಾರ ಸಮೇತನೂ ಆಗಿದ್ದೀಯೆ. ಇಂತಹ ನೀನು ಬಲಾತ್ಕಾರದಿಂದ ನನ್ನನ್ನು ಎಳೆದೊಯ್ಯಲು ಸಿದ್ಧನಾಗಿದ್ದೀಯೆ. ಹೀಗಿರಲು ನಾನೇನು ನಿನಗೆ ಪ್ರತೀಕಾರಮಾಡುವೆ ?

ಋಷಿಯು ಹೇಳಿದನು :—

೯. ದೇವಿಯಿಂದ ಈ ರೀತಿಯಾಗಿ ನುಡಿಯಲ್ಪಟ್ಟ ಧೂಮ್ರಲೋಚನಾಸುರನು ಕೂಡಲೆ ದೇವಿಯ ಮೇಲೆ ಎರಗಲು ಓಡಿಹೋದನು. ಅಷ್ಟರಲ್ಲಿ ದೇವಿಯು ಹುಂಕಾರದಿಂದ ಆ ಅಸುರನನ್ನು ಭಸ್ಮಮಾಡಿಬಿಟ್ಟಳು.

೧೦. ಅನಂತರದಲ್ಲಿ ಕೋಪದಿಂದ ಮೇಲೆ ಧುಮುಕಿದ ಮಹತ್ತಾದ ಅಸುರ ಸೈನ್ಯವನ್ನು ಜಗದಂಬಿಕೆಯಾದ ದೇವಿಯು ತೀಕ್ಷ್ಣವಾದ ಬಾಣ, ಶಕ್ತ್ಯಾಯುಧ ಮತ್ತು ಪರಶು ಮುಂತಾದ ಆಯುಧಗಳಿಂದ ಮುಚ್ಚಿಹಾಕಿದಳು.

ತತೋ ಧುತಸಟಃ ಕೋಪಾತ್ಕೃತ್ವಾ ನಾದಂ ಸುಭೈರವಮ್ ।
ಪಪಾತಾಸುರಸೇನಾಯಾಂ ಸಿಹ್ಮೋ ದೇವ್ಯಾಸ್ತು ವಾಹನಃ ॥೧೧॥

ಕಾಂಶ್ಚಿತ್ಕರಪ್ರಹಾರೇಣ ದೈತ್ಯಾನಾಸ್ಯೇನ ಚಾಪರಾನ್ ।
ಆಕ್ರಮ್ಯ ಚರಣೇನಾನ್ಯಾನ್ನಿಜಘಾನ ಮಹಾಸುರಾನ್ ॥೧೨॥

ಕೇಷಾಂ ಚಿತ್ಪಾಟಯಾಮಾಸ ನಖೈಃ ಕೋಷ್ಠಾನಿ ಕೇಸರೀ ।
ತಥಾ ತಲಪ್ರಹಾರೇಣ ಶಿರಾಂಸಿ ಕೃತವಾನ್ ಪೃಥಕ್ ॥೧೩॥

ವಿಚ್ಛಿನ್ನಬಾಹುಶಿರಸಃ ಕೃತಾಸ್ತೇನ ತಥಾಪರೇ ।
ಪಪೌ ಚ ರುಧಿರಂ ಕೋಷ್ಠಾದನ್ಯೇಷಾಂ ಧುತಕೇಸರಃ ॥೧೪॥

ಕ್ಷಣೇನ ತದ್ಬಲಂ ಸರ್ವಂ ಕ್ಷಯಂ ನೀತಂ ಮಹಾತ್ಮನಾ ।
ತೇನ ಕೇಸರಿಣಾ ದೇವ್ಯಾ ವಾಹನೇನಾತಿಕೋಪಿನಾ ॥೧೫॥

---

೧೧. ತರುವಾಯ ದೇವಿಯ ವಾಹನವಾಗಿದ್ದ ಸಿಹ್ಮವು ಕೋಪದಿಂದ ತನ್ನ ಕೇಸರಗಳನ್ನು ಕೊಡವಿಕೊಂಡು ಭಯಂಕರವಾಗಿ ಗರ್ಜನೆಯನ್ನು ಮಾಡುತ್ತ ಅಸುರಸೈನ್ಯದ ನಡುವೆ ಧುಮುಕಿತು.

೧೨. ಮತ್ತು ಆ ಸಿಹ್ಮವು ಕೆಲವರು ದೈತ್ಯರನ್ನು ಕೈಯ ಏಟಿನಿಂದ ಮತ್ತೆ ಕೆಲವರನ್ನು ಬಾಯಿಯಲ್ಲಿ ಹಾಕಿಕೊಂಡು ಅಗಿಯುವುದರಿಂದ ಮತ್ತು ಇನ್ನು ಕೆಲವರನ್ನು ಕಾಲಿನಿಂದ ತುಳಿಯುವುದರಿಂದ ಕೊಂದುಹಾಕಿತು.

೧೩. ಮತ್ತು ಆ ಸಿಂಹವು ಕೆಲವು ಮಂದಿ ರಾಕ್ಷಸರ ಹೊಟ್ಟೆಗಳನ್ನು ಉಗುರುಗಳಿಂದ ಬಗೆಯಿತು. ಮತ್ತು ಇನ್ನು ಕೆಲವರನ್ನು ಕೈಯಿಂದ ಪ್ರಹರಿಸಿ ತಲೆಗಳನ್ನು ಬೇರ್ಪಡಿಸಿತು.

೧೪. ಮತ್ತೆ ಕೆಲವು ಮಂದಿ ರಾಕ್ಷಸರು ಕತ್ತರಿಸಲ್ಪಟ್ಟ ಬಾಹು-ಶಿರ ಮುಂತಾದ ಅವಯವವುಳ್ಳವರಾದರು. ಮತ್ತು ಹಾಗೆಯೆ ಸಿಂಹವು ಕೇಸರಗಳನ್ನು ಕೊಡವಿಕೊಳ್ಳುತ್ತ ಕೆಲವರ ಹೊಟ್ಟೆಯಿಂದ ರಕ್ತನನ್ನು ಹೀರಿ ಕುಡಿಯಿತು.

೧೫. ಹೆಚ್ಚಾದ ಮಾಹಾತ್ಮ್ಯವುಳ್ಳದ್ದೂ, ಅತಿಕೋಪಗೊಂಡಿರುವುದೂ ಆದ ದೇವಿಯ ವಾಹನವಾದ ಸಿಂಹದಿಂದ ನಿಮಿಷಮಾತ್ರದಲ್ಲಿ ಆ ಅಸುರರ ಎಲ್ಲ ಸೈನ್ಯವು ಧ್ವಂಸಗೊಳಿಸಲ್ಪಟ್ಟಿತು.

ಶ್ರುತ್ವಾ ತಮಸುರಂ ದೇವ್ಯಾ ನಿಹತಂ ಧೂಮ್ರಲೋಚನಮ್ ।
ಬಲಂ ಚ ಕ್ಷಯಿತಂ ಕೃತ್ಸ್ನಂ ದೇವೀಕೇಸರಿಣಾ ತತಃ ॥೧೬॥

ಚುಕೋಪ ದೈತ್ಯಾಧಿಪತಿಃ ಶುಮ್ಭಃ ಪ್ರಸ್ಫುರಿತಾಧರಃ ।
ಆಜ್ಞಾಪಯಾಮಾಸ ಚ ತೌ ಚಣ್ಡಮುಣ್ಡೌ ಮಹಾಸುರೌ ॥೧೭॥

ಹೇ ಚಣ್ಡ ಹೇ ಮುಣ್ಡ ಬಲೈರ್ಬಹುಭಿಃ ಪರಿವಾರಿತೌ ।
ಗಚ್ಛತಂ ತತ್ರ ಗತ್ವಾ ಚ ಸಾ ಸಮಾನೀಯತಾಂ ಲಘು ॥೧೮॥

ಕೇಶೇಷ್ವಾಕೃಷ್ಯ ಬದ್ಧ್ವಾ ವಾ ಯದಿ ವಃ ಸಂಶಯೋ ಯುಧಿ ।
ತದಾಶೇಷಾಯುಧೈಃ ಸರ್ವೈರಸುರೈರ್ವಿನಿಹನ್ಯತಾಮ್ ॥೧೯॥

---

೧೬. ಇಷ್ಟರಲ್ಲಿ ದೈತ್ಯರಾಜನಾದ ಶುಂಭಾಸುರನು ದೇವಿಯಿಂದ ಧೂಮ್ರಲೋಚನ ದೈತ್ಯನು ಹತನಾದುದನ್ನೂ ಮತ್ತು ದೇವಿಯ ಸಿಂಹದಿಂದ ಸಮಸ್ತ ಅಸುರ ಸೈನ್ಯವು ಕ್ಷಯಗೊಳಿಸಲ್ಪಟ್ಟಿರುವುದನ್ನೂ ಕೇಳಿದನು.

೧೭. ಆಗ ದೈತ್ಯೇಶ್ವರನಾದ ಶುಂಭಾಸುರನು ಕೋಪತಾಳಿದನು. ಮತ್ತು ಕೋಪದಿಂದ ಚಲಿಸುವ ಕೆಳತುಟಿಯುಳ್ಳವನಾಗಿ ಚಂಡ-ಮುಂಡರೆಂಬ ಇಬ್ಬರು ದೈತ್ಯರನ್ನು ಕರೆದು ಹೀಗೆ ಆಜ್ಞಾಪಿಸಿದನು.

೧೮. ಎಲೈ, ಚಂಡಾಸುರನೇ! ಎಲೈ, ಮುಂಡಾಸುರನೇ! ಸಮಸ್ತ ಸೈನ್ಯದೊಡಗೂಡಿ ನೀವು ಈಗಲೇ ಅಲ್ಲಿಗೆ ಹೋಗಿರಿ. ಮತ್ತು ದೇವಿಯ ಬಳಿಗೆ ಹೋಗಿ ಅವಳನ್ನು ಬೇಗ ಇಲ್ಲಿಗೆ ಕರೆದುಕೊಂಡು ಬನ್ನಿ.

೧೯. ನೀವು ಆಕೆಯನ್ನು ಕೂದಲು ಹಿಡಿದು, ಅಥವಾ ಹಗ್ಗಗಳಿಂದ ಕಟ್ಟಿ ಬಿಗಿದು ಕರೆತನ್ನಿರಿ. ಒಂದು ವೇಳೆ ಎಳೆತರುವ ವಿಷಯದಲ್ಲಿ ನಿಮಗೆ ಸಂಶಯವುಂಟಾದರೆ ಯುದ್ಧಮಾಡಿ ಸರ್ವ ಅಸುರರೂ ಸೇರಿ ಎಲ್ಲ ಆಯುಧಗಳಿಂದ ಅವಳು ವಶೀಕರಿಸಲ್ಪಡಲಿ.

**ತಸ್ಯಾಂ ಹತಾಯಾಂ ದುಷ್ಟಾಯಾಂ ಸಿಹ್ಮೇ ಚ ವಿನಿಪಾತಿತೇ ।**
**ಶೀಘ್ರಮಾಗಮ್ಯತಾಂ ಬದ್ಧ್ವಾ ಗೃಹೀತ್ವಾ ತಾಮಥಾಮ್ಬಿಕಾಮ್ ॥೨೦॥**

**ಇತಿ ಶ್ರೀ ಮಾರ್ಕಣ್ಡೇಯ ಮಹಾಪುರಾಣೇ ದೇವೀಮಾಹಾತ್ಮ್ಯೇ ಧೂಮ್ರಲೋಚನವಧೋ ನಾಮ ತ್ರ್ಯಶೀತಿತಮೋಽಧ್ಯಾಯಃ**

---

೨೦. ಅನಂತರವಲ್ಲಿ ದುಷ್ಟಳಾದ ಅಂಗನೆಯು ಹೊಡೆದು-ಬಡೆದು ಪರಗೊಳಿಸಲ್ಪಡಲಾಗಿ ಮತ್ತು ಸಿಂಹವು ವಧಿಸಲ್ಪಡಲಾಗಿ ಆ ಅಂಬಿಕೆಯನ್ನು ಕಟ್ಟಿಹಿಡಿದು ಬೇಗ ಇಲ್ಲಿಗೆ ಕರೆತನ್ನಿರಿ.

ಮಾರ್ಕಂಡೇಯ ಮಹಾಪುರಾಣದಲ್ಲಿ ಎಂಭತ್ತಮೂರನೆಯ ಅಧ್ಯಾಯವು ಮುಗಿದುದು.



॥ ಓಂ ಶ್ರೀ ದುರ್ಗಾಯೈ ನಮಃ ॥

# ಮಾರ್ಕಂಡೇಯ ಪುರಾಣಂ

## ಚತುರಶೀತಿತಮೋಽಧ್ಯಾಯಃ

**ಋಷಿರುವಾಚ :—**

**ಆಜ್ಞಪ್ತಾಸ್ತೇ ತತೋ ದೈತ್ಯಾಶ್ಚಣ್ಡಮುಣ್ಡಪುರೋಗಮಾಃ ।**
**ಚತುರಙ್ಗಬಲೋಪೇತಾ ಯಯುರಭ್ಯುದ್ಯತಾಯುಧಾಃ ॥೧॥**

**ದದೃಶುಸ್ತೇ ತತೋ ದೇವೀಮೀಷದ್ಧಾಸಾಂ ವ್ಯವಸ್ಥಿತಾಮ್ ।**
**ಸಿಂಹಸ್ಯೋಪರಿ ಶೈಲೇನ್ದ್ರಶೃಙ್ಗೇ ಮಹತಿ ಕಾಞ್ಚನೇ ॥೨॥**

---

## ಎಂಭತ್ತನಾಲ್ಕನೆಯ ಅಧ್ಯಾಯ

ಸುಮೇಧ ಋಷಿಯು ಇಂತೆಂದನು :—

೧. ತರುವಾಯ ಚಂಡ-ಮುಂಡ ಮುಂತಾದ ಅನೇಕ ದೈತ್ಯರು ಶುಂಭಾಸುರನಿಂದ ಆಜ್ಞೆಪಡೆದವರಾಗಿ ಚತುರಂಗ ಬಲಸಮೇತರೂ ಮತ್ತು ಎತ್ತಿಹಿಡಿದ ಆಯುಧವುಳ್ಳವರೂ ಆಗಿ ದೇವಿಯಿದ್ದ ಸ್ಥಳಕ್ಕೆ ಧಾವಿಸಿದರು.

೨. ಅನಂತರದಲ್ಲಿ ಸುವರ್ಣಮಯವಾದ, ದೊಡ್ಡ ಹಿಮವತ್ಪರ್ವತದ ಶಿಖರದಲ್ಲಿ ಸಿಂಹವಾಹನವನ್ನು ಏರಿ ಕುಳಿತುಕೊಂಡವಳೂ, ಸ್ವಲ್ಪ ನಗುಮುಖದಿಂದ ಕೂಡಿದವಳೂ ಮತ್ತು ಹಾಗೆಯೆ ದೃಢಸಂಕಲ್ಪದಿಂದ ಅಚಲವಾಗಿ ನಿಂತವಳೂ ಆದ ದೇವಿಯನ್ನು ಕಂಡರು.

ತೇ ದೃಷ್ಟ್ವಾ ತಾಂ ಸಮಾದಾತುಮುದ್ಯಮಂ ಚಕ್ರುರುದ್ಯತಾಃ ।
ಆಕೃಷ್ಟಚಾಪಾಸಿಧರಾಸ್ತಥಾನ್ಯೇ ತತ್ಸಮೀಪಗಾಃ ॥೩॥

ತತಃ ಕೋಪಂ ಚಕಾರೋಚ್ಚೈರಂಬಿಕಾ ತಾನರೀನ್ಪ್ರತಿ ।
ಕೋಪೇನ ಚಾಸ್ಯಾ ವದನಂ ಮಷೀವರ್ಣಮಭೂತ್ತದಾ ॥೪॥

ಭ್ರುಕುಟೀಕುಟಿಲಾತ್ತಸ್ಯಾ ಲಲಾಟಫಲಕಾದ್ದ್ರುತಮ್ ।
ಕಾಲೀಕರಾಲವದನಾ ವಿನಿಷ್ಕ್ರಾನ್ತಾಸಿಪಾಶಿನೀ ॥೫॥

ವಿಚಿತ್ರಖಟ್ವಾಙ್ಗಧರಾ ನರಮಾಲಾವಿಭೂಷಣಾ ।
ದ್ವೀಪಿಚರ್ಮಪರೀಧಾನಾ ಶುಷ್ಕಮಾಂಸಾತಿಭೈರವಾ ॥೬॥

---

೩. ಚಂಡ-ಮುಂಡ ಮುಂತಾದ ಅಸುರರು ಸಿದ್ಧರಾಗಿ ಬಂದು ದೇವಿಯನ್ನು ನೋಡಿ ಅವಳನ್ನು ಎತ್ತಿಕೊಂಡು ಹೋಗಲು ಸೆಳೆದ ಬಿಲ್ಲು-ಬಾಣ-ಕತ್ತಿ ಮುಂತಾದ ಆಯುಧವುಳ್ಳವರೂ ಕೆಲವರು ದೇವಿಯ ಹತ್ತಿರಕ್ಕೆ ಹೋದವರೂ ಆಗಿ ಯತ್ನಮಾಡಲು ಆರಂಭಿಸಿದರು.

೪. ಹೀಗೆ ಅಸುರರು ಮುತ್ತಿಗೆ ಹಾಕಿಕೊಂಡಾಗ ಚಂಡಿಕಾಂಬಿಕೆಯು ಆ ಅಸುರರ ಮೇಲೆ ಅಧಿಕವಾಗಿ ಕೋಪಹೊಂದಿದಳು. ಆಗ ಮಿತಿಮೀರಿದ ಕೋಪದಿಂದ ಅಂಬಿಕೆಯ ಮುಖವು ಮಸಿಯಂತೆ ಕಪ್ಪಾಗಿಹೋಯಿತು.

೫. ಹುಬ್ಬು ಗಂಟಿಕ್ಕಿದುದರಿಂದ ವಕ್ರವಾದ, ವಿಶಾಲವಾದ ದೇವಿಯ ಲಲಾಟಭಾಗದಿಂದ ಕತ್ತಿ-ಪಾಶಗಳನ್ನು ಧರಿಸಿದವಳೂ ಮತ್ತು ಭಯಂಕರವಾದ ಮುಖವುಳ್ಳವಳೂ ಆದ ಕಾಳೀದೇವಿಯು ಆವಿರ್ಭವಿಸಿದಳು.

೬. ಆ ಕಾಳಿಕಾದೇವಿಯು ವಿಚಿತ್ರವಾದ ಖಟ್ವಾಂಗ ಆಯುಧವನ್ನು ಧರಿಸಿದವಳೂ, ನರರ ಮುಂಡಮಾಲೆಯನ್ನು ಧರಿಸಿದವಳೂ, ವ್ಯಾಘ್ರಚರ್ಮಾಂಬರವನ್ನು ಧರಿಸಿದವಳೂ ಆಗಿದ್ದಳು.

ಅತಿವಿಸ್ತಾರವದನಾ ಜಿಹ್ವಾಲಲನಭೀಷಣಾ ।
ನಿಮಗ್ನಾರಕ್ತನಯನಾ ನಾದಾಪೂರಿತದಿಙ್ಮುಖಾ ||೭||

ಸಾ ವೇಗೇನಾಭಿಪತಿತಾ ಘಾತಯನ್ತೀ ಮಹಾಸುರಾನ್ ।
ಸೈನ್ಯೇ ತತ್ರ ಸುರಾರೀಣಾಮಭಕ್ಷಯತ ತದ್ಬಲಮ್ ||೮||

ಪಾರ್ಷ್ಣಿಗ್ರಾಹಾಙ್ಕುಶಗ್ರಾಹಿಯೋಧಘಣ್ಟಾಸಮನ್ವಿತಾನ್ ।
ಸಮಾದಾಯೈಕಹಸ್ತೇನ ಮುಖೇ ಚಿಕ್ಷೇಪ ವಾರಣಾನ್ ||೯||

ತಥೈವ ಯೋಧಂ ತುರಗೈ ರಥಂ ಸಾರಥಿನಾ ಸಹ ।
ನಿಕ್ಷಿಪ್ಯ ವಕ್ತ್ರೇ ದಶನೈಶ್ಚರ್ವಯನ್ತ್ಯತಿಭೈರವಮ್ ||೧೦||

---

೭. ಮತ್ತು ಬಹಳ ವಿಸ್ತಾರವಾದ ಮುಖವುಳ್ಳವಳೂ, ನಾಲಿಗೆಯ ಚಂಚಲತೆಯಿಂದ ಭಯಂಕರಳೂ, ಹೆಚ್ಚಾಗಿ ಒಳಗೆ ಸೇರಿಕೊಂಡ ಕೆಂಪುಕಣ್ಣು-ಗಳುಳ್ಳವಳೂ ಮತ್ತು ಅಟ್ಟಹಾಸ ಧ್ವನಿಯಿಂದ ವ್ಯಾಪಿಸಿದ ದಿಗಂತವುಳ್ಳವಳೂ ಆಗಿದ್ದಳು.

೮. ಆ ಕಾಲಿಕಾದೇವಿಯು ವೇಗದಿಂದ ಎದುರು ಬಿದ್ದು ದೊಡ್ಡ ದೊಡ್ಡ ರಾಕ್ಷಸರನ್ನು ವಧಿಸುತ್ತ ದೇವಶತ್ರುಗಳ ಸೈನ್ಯದ ಮಧ್ಯಕ್ಕೆ ನುಗ್ಗಿ ಆ ಸೈನ್ಯವನ್ನು ನುಂಗಿ ಹಾಕಿದಳು.

೯. ಕಾಲಿಕಾದೇವಿಯು ಬೆಂಬಲಿಗರು, ಅಂಕುಶವನ್ನು ಹಿಡಿದ ಮಾವ-ಟಿಗರು, ಶಿಪಾಯಿಗಳು ಮತ್ತು ಘಂಟೆ ಮುಂತಾದ ಪರಿವಾರ ಸಮೇತವಾದ ಆನೆಗಳನ್ನು ಒಂದು ಕೈಯ್ಯಲ್ಲಿ ಎತ್ತಿ ಬಾಯಿಯಲ್ಲಿ ಹಾಕಿಕೊಂಡು ನುಂಗಿದಳು.

೧೦. ಕಾಳೀದೇವಿಯು ಹಾಗೆಯೆ ಕುದುರೆಗಳೊಡನೆ ಶಿಪಾಯಿಗಳನ್ನೂ ಸಾರಥಿಗಳೊಡನೆ ರಥಗಳನ್ನೂ ಬಾಯಿಗೆಹಾಕಿಕೊಂಡು ಬಲು ಭಯಂಕರವಾಗಿ ಹಲ್ಲುಗಳಿಂದ ಅಗಿದು ಹಾಕಿದಳು.

ಏಕಂ ಜಗ್ರಾಹ ಕೇಶೇಷು ಗ್ರೀವಾಯಾಮಥ ಚಾಪರಮ್ ।
ಪಾದೇನಾಕ್ರಮ್ಯ ಚೈವಾನ್ಯಮುರಸಾನ್ಯಮಪೋಥಯತ್ ॥೧೧॥

ತೈರ್ಮುಕ್ತಾನಿ ಚ ಶಸ್ತ್ರಾಣಿ ಮಹಾಸ್ತ್ರಾಣಿ ತಥಾಸುರೈಃ ।
ಮುಖೇನ ಜಗ್ರಾಹ ರುಷಾ ದಶನೈರ್ಮಥಿತಾನ್ಯಪಿ ॥೧೨॥

ಬಲಿನಾಂ ತದ್ಬಲಂ ಸರ್ವಮಸುರಾಣಾಂ ದುರಾತ್ಮನಾಮ್ ।
ಮಮರ್ದಾಭಕ್ಷಯಚ್ಚಾನ್ಯಾನನ್ಯಾಂಶ್ಚಾತಾಡಯತ್ತಥಾ ॥೧೩॥

ಅಸಿನಾ ನಿಹತಾಃ ಕೇಚಿತ್ಕೇಚಿತ್ಖಟ್ವಾಙ್ಗತಾಡಿತಾಃ ।
ಜಗ್ಮುರ್ವಿನಾಶಮಸುರಾ ದನ್ತಾಗ್ರಾಭಿಹತಾ ರಣೇ ॥೧೪॥

---

೧೧. ಮತ್ತು ಆ ಕಾಲಿಕಾದೇವಿಯು ಅಸುರ ಸೈನ್ಯದಲ್ಲಿ ಒಬ್ಬನನ್ನು ಕೂದಲು ಹಿಡಿದೆತ್ತಿದಳು. ಮತ್ತೊಬ್ಬನನ್ನು ಕತ್ತಿನಲ್ಲಿ ಹಿಡಿದಳು. ಇನ್ನೊಬ್ಬನನ್ನು ಕಾಲಿನಿಂದ ಮೆಟ್ಟಿಹಿಡಿದಳು. ಹಾಗು ಇನ್ನೊಬ್ಬನನ್ನು ಎದೆಯಲ್ಲಿ ಅಪ್ಪಳಿಸಿದಳು.

೧೨. ಆ ಅಸುರರಿಂದ ಪ್ರಯೋಗಿಸಲ್ಪಟ್ಟಿರುವ ಶಸ್ತ್ರ ಮತ್ತು ಮಂತ್ರ-ಮಯವಾದ ಅಸ್ತ್ರಗಳನ್ನು ಆ ಕಾಲಿಕಾದೇವಿಯು ಕೋಪದಿಂದ ಕೂಡಿ ಬಾಯಿಯಿಂದ ಕಚ್ಚಿಹಿಡಿದು ಕೋರೆಹಲ್ಲುಗಳಿಂದ ಪುಡಿಮಾಡಿದಳು.

೧೩. ಆ ಕಾಳೀದೇವಿಯು ಬಲಿಷ್ಠರೂ ನೀಚಸ್ವಭಾವದವರೂ ಆದ ಆ ಅಸುರರ ಸೈನ್ಯದಲ್ಲಿ ಕೆಲವುಭಾಗವನ್ನು ಮರ್ದಿಸಿದಳು. ಕೆಲವರನ್ನು ತಿಂದು-ಹಾಕಿದಳು. ಇನ್ನು ಕೆಲವರನ್ನು ಪ್ರಹರಿಸಿದಳು. ಹೀಗೆ ಬಗೆಬಗೆಯಾಗಿ ಎಲ್ಲ ಸೈನ್ಯವನ್ನು ಸಂಹರಿಸತೊಡಗಿದಳು.

೧೪. ಹೀಗೆ ಕಾಳೀದೇವಿಯು ಮಾಡುತ್ತಿದ್ದ ಯುದ್ಧದಲ್ಲಿ ಕೆಲವರು ಅಸುರರು ಕತ್ತಿಯಿಂದ ಸತ್ತುಬಿದ್ದರು. ಮತ್ತೆ ಕೆಲವರು ಖಟ್ವಾಂಗ ಆಯುಧ-ದಿಂದ ಪೀಡಿತರಾಗಿ ಬಿದ್ದರು. ಇನ್ನೂ ಕೆಲವರು ಕೋರೆಹಲ್ಲುಗಳ ಅಗ್ರದಿಂದ ಚುಚ್ಚಲ್ಪಟ್ಟವರಾಗಿ ನಾಶಹೊಂದಿದರು.

ಕ್ಷಣೇನ ತನ್ಮಹಾಸೈನ್ಯಮಸುರಾಣಾಂ ನಿಪಾತಿತಮ್ ।
ದೃಷ್ಟ್ವಾ ಚಣ್ಡೋಽಭಿದುದ್ರಾವ ತಾಂ ಕಾಲೀಮತಿಭೀಷಣಾಮ್॥೧೫॥

ಶರವರ್ಷೈರ್ಮಹಾಭೀಮೈರ್ಭೀಮಾಕ್ಷೀಂ ತಾಂ ಮಹಾಸುರಃ ।
ಛಾದಯಾಮಾಸ ಚಕ್ರೈಶ್ಚ ಮುಣ್ಡಃ ಕ್ಷಿಪ್ತೈಃ ಸಹಸ್ರಶಃ ॥೧೬॥

ತಾನಿ ಚಕ್ರಾಣ್ಯನೇಕಾನಿ ವಿಶಮಾನಾನಿ ತನ್ಮುಖಮ್ ।
ಬಭುರ್ಯಥಾರ್ಕಬಿಮ್ಬಾನಿ ಸುಬಹೂನಿ ಘನೋದರಮ್ ॥೧೭॥

ತತೋ ಜಹಾಸಾತಿರುಷಾ ಭೀಮಂ ಭೈರವನಾದಿನೀ ।
ಕಾಲೀ ಕರಾಲವಕ್ತ್ರಾನ್ತರ್ದುರ್ದರ್ಶದಶನೋಜ್ಜ್ವಲಾ ॥೧೮॥

---

೧೫. ಹೀಗೆ ಸ್ವಲ್ಪಹೊತ್ತಿನಲ್ಲಿ ಆ ರಾಕ್ಷಸರ ಭಾರಿಯಾದ ಸೈನ್ಯವು ಕಾಳಿಕಾದೇವಿಯಿಂದ ಸಂಹರಿಸಲ್ಪಟ್ಟಿರುವುದನ್ನು ಕಂಡು ಚಂಡಾಸುರನು ಅತಿಭಯಂಕರಳಾದ ಆ ಕಾಳಿಕಾದೇವಿಯನ್ನು ಎದುರಿಸಿ ಮುಂದೆ ಬಂದನು.

೧೬. ಆಗ ಮಹಾಸುರನಾದ ಚಂಡನು ಅತಿಭೀಷಣವಾದ ಬಾಣ-ವೃಷ್ಟಿಯಿಂದ ಭಯಂಕರವಾದ ಕಣ್ಣುಗಳುಳ್ಳ ಕಾಲಿಕಾದೇವಿಯನ್ನು ಮುಚ್ಚಿ-ಹಾಕಿದನು. ಮತ್ತು ಅನೇಕ ಮುಂಡಗಳನ್ನು ಕತ್ತರಿಸಿದ ಚಕ್ರಾಯುಧಗಳನ್ನು ಕಾಳಿಯ ಮೇಲೆ ಬಿಟ್ಟನು.

೧೭. ಚಂಡಾಸುರನು ಪ್ರಯೋಗಿಸಿದ ಅನೇಕ ಚಕ್ರಾಯುಧಗಳು ಕಾಳೀದೇವಿಯ ಮುಖವನ್ನು ಪ್ರವೇಶಿಸುವಾಗ ಅನೇಕ ಸೂರ್ಯಬಿಂಬಗಳು ಮೋಡಗಳ ನಡುವೆ ಹೊಕ್ಕಂತೆ ಕಾಣಿಸುತ್ತಿದ್ದುವು.

೧೮. ತರುವಾಯ ಭೀಷಣವಾದ ಗರ್ಜನವುಳ್ಳವಳೂ, ವಿಕಾರವಾದ ಮುಖದ ಒಳಭಾಗದಲ್ಲಿ ನೋಡಲಾಗದ ಹಾಗೆ ಭಯಂಕರವಾದ ಹಲ್ಲುಗಳಿಂದ ಉಜ್ವಲಳೂ ಆದ ಕಾಳೀದೇವಿಯು ಬಹಳ ಕೋಪದಿಂದ ಭಯವಾಗುವ ಹಾಗೆ ಅಟ್ಟಹಾಸಮಾಡಿದಳು.

ಉತ್ಥಾಯ ಚ ಮಹಾಸಿಹ್ಮಂ ದೇವೀ ಚಣ್ಡಮಧಾವತ ।
ಗೃಹೀತ್ವಾ ಚಾಸ್ಯ ಕೇಶೇಷು ಶಿರಸ್ತೇನಾಸಿನಾಚ್ಛಿನತ್ ॥೧೯॥

ಛಿನ್ನೇ ಶಿರಸಿ ದೈತ್ಯೇನ್ದ್ರಶ್ಚಕ್ರೇ ನಾದಂ ಸುಭೈರವಮ್ ।
ತೇನ ನಾದೇನ ಮಹತಾ ತ್ರಾಸಿತಂ ಭುವನತ್ರಯಮ್ ॥೨೦॥

ಅಥ ಮುಣ್ಡೋಽಭ್ಯಧಾವತ್ತಾಂ ದೃಷ್ಟ್ವಾ ಚಣ್ಡಂ ನಿಪಾತಿತಮ್ ।
ತಮಪ್ಯಪಾತಯದ್ಭೂಮೌ ಖಟ್ವಾಙ್ಗಾಭಿಹತಂ ರುಷಾ ॥೨೧॥

ಹತಶೇಷಂ ತತಃ ಸೈನ್ಯಂ ದೃಷ್ಟ್ವಾ ಚಣ್ಡಂ ನಿಪಾತಿತಮ್ ।
ಮುಣ್ಡಂ ಚ ಸುಮಹಾವೀರ್ಯಂ ದಿಶೋ ಭೇಜೇ ಭಯಾತುರಮ್ ॥೨೨॥

ಶಿರಶ್ಚಣ್ಡಸ್ಯ ಕಾಲೀ ಸಾ ಗೃಹೀತ್ವಾ ಮೌಣ್ಡಮೇವ ಚ ।
ಪ್ರಾಹ ಪ್ರಚಣ್ಡಾಟ್ಟಹಾಸಮಿಶ್ರಮಭ್ಯೇತ್ಯ ಚಣ್ಡಿಕಾಮ್ ॥೨೩॥

---

೧೯. ಮತ್ತು ಕಾಲಿಕಾದೇವಿಯು ದೊಡ್ಡದಾದ ಕತ್ತಿಯನ್ನು ಎತ್ತಿ-ಹಿಡಿದವಳಾಗಿ ಕೋಪದಿಂದ ಚಂಡಾಸುರನ ಹತ್ತಿರಕ್ಕೆ ಧಾವಿಸಿದಳು. ಮತ್ತು ಅವನ ಜುಟ್ಟನ್ನು ಹಿಡಿದು ಬಾಗಿಸಿ ಆ ಕತ್ತಿಯಿಂದ ಅವನ ಶಿರವನ್ನು ಕತ್ತರಿಸಿದಳು.

೨೦. ಹೀಗೆ ಕಾಲಿಯಿಂದ ಶಿರಶ್ಛೇದವಾಗುತ್ತಿರಲು ದೈತ್ಯರಲ್ಲಿ ಪ್ರಮುಖನಾದ ಚಂಡಾಸುರನು ಭಯಂಕರವಾಗಿ ಗರ್ಜನಮಾಡಿದನು. ಆ ಗರ್ಜನೆಯ ದೊಡ್ಡ ಧ್ವನಿಯಿಂದ ಮೂರು ಲೋಕಗಳು ಬೆದರಿದುವು.

೨೧. ಅನಂತರ ಮುಂಡಾಸುರನು ಚಂಡನು ವಧೆಯಾಗಿ ಬಿದ್ದುದನ್ನು ಕಂಡು ಆ ದೇವಿಯನ್ನು ಕೋಪದಿಂದ ಎದುರಿಸಲು ಹೋದನು. ಆಗ ದೇವಿಯು ಕೋಪದಿಂದ ಖಟ್ವಾಂಗ ಆಯುಧದಿಂದ ಹೊಡೆದು ಅವನನ್ನು ಕೊಂದು ಉರುಳಿಸಿದಳು.

೨೨. ಚಂಡ-ಮುಂಡರ ವಧವಾದ ಬಳಿಕ ಹತರಾಗಿ ಬಿದ್ದವರ ಹೊರತು ಉಳಿದ ಸೈನ್ಯವು ಚಂಡ-ಮುಂಡರು ಮಹಾ ವೀರ್ಯವಂತರು ಕೂಡ ದೇವಿಯಿಂದ ಮಡಿದು ಬಿದ್ದುದನ್ನು ಕಂಡು ಭಯದಿಂದ ಹತ್ತು ದಿಕ್ಕುಗಳಿಗೆ ಓಡಿಹೋಯಿತು.

೨೩. ಕಾಲಿಕಾದೇವಿಯು ಚಂಡ-ಮುಂಡರಿಬ್ಬರು ಅಸುರರ ಮುಂಡಗಳನ್ನು ಹಿಡಿದುಕೊಂಡು ಚಂಡಿಕಾಂಬಿಕೆಯ ಎದುರು ಬಂದು ಪ್ರಚಂಡವಾಗಿ ಅಟ್ಟಹಾಸಮಾಡುತ್ತ ಹೀಗೆ ಹೇಳಿದಳು.

ಮಯಾ ತವಾತ್ರೋಪಹೃತೌ ಚಣ್ಡಮುಣ್ಡೌ ಮಹಾಪಶೂ ।
ಯುದ್ಧಯಜ್ಞೇ ಸ್ವಯಂ ಶುಮ್ಭಂ ನಿಶುಮ್ಭಂ ಚ ಹನಿಷ್ಯಸಿ ॥೨೪॥

ಋಷಿರುವಾಚ :—

ತಾವಾನೀತೌ ತತೋ ದೃಷ್ಟ್ವಾ ಚಣ್ಡಮುಣ್ಡೌ ಮಹಾಸುರೌ ।
ಉವಾಚ ಕಾಲೀಂ ಕಲ್ಯಾಣೀ ಲಲಿತಂ ಚಣ್ಡಿಕಾ ವಚಃ ॥೨೫॥

ಶ್ರೀದೇವ್ಯುವಾಚ :—

ಯಸ್ಮಾಚ್ಚಣ್ಡಂ ಚ ಮುಣ್ಡಂ ಚ ಗೃಹೀತ್ವಾ ತ್ವಮುಪಾಗತಾ ।
ಚಾಮುಣ್ಡೇತಿ ತತೋ ಲೋಕೇ ಖ್ಯಾತಾ ದೇವೀ ಭವಿಷ್ಯಸಿ ॥೨೬॥

ಇತಿ ಶ್ರೀ ಮಾರ್ಕಣ್ಡೇಯ ಮಹಾಪುರಾಣೇ ದೇವೀಮಾಹಾತ್ಮ್ಯೇ
ಚಣ್ಡ-ಮುಣ್ಡವಧೋ ನಾಮ ಚತುರಶೀತಿತಮೋಽಧ್ಯಾಯಃ

---

೨೪. ದೇವಿಯೆ! ಈಗ ಜರುಗಿದ ಯುದ್ಧಯಜ್ಞದಿಂದ ಚಂಡ-ಮುಂಡರೆಂಬ ಎರಡು ಪಶುಗಳನ್ನು ನಿನಗೆ ಬಲಿಯಾಗಿ ತಂದು ಒಪ್ಪಿಸಿದ್ದೇನೆ. ಇನ್ನು ನೀನು ಶುಂಭ-ನಿಶುಂಭರನ್ನು ಸಂಹರಿಸು.

ಋಷಿಯು ಹೇಳಿದನು :—

೨೫. ತರುವಾಯ ಮಂಗಳಕರಳಾದ ಚಂಡಿಕಾಂಬಿಕೆಯು ಚಂಡ-ಮುಂಡರೆಂಬ ಮಹಾ ಅಸುರರನ್ನು ವಧಿಸಿ ಮುಂಡಗಳನ್ನು ಕಾಳಿಯು ತಂದಿರುರುವುದನ್ನು ಕಂಡು ಅವಳನ್ನು ಕುರಿತು ಉಲ್ಲಾಸಕರವಾದ ಈ ವಚನವನ್ನು ಹೇಳಿದಳು.

ಶ್ರೀ ದೇವಿಯು ಹೇಳಿದಳು :—

೨೬. ಯಾವ ಕಾರಣದಿಂದ ನೀನು ಯುದ್ಧದಲ್ಲಿ ಜಯಿಸಿ ಚಂಡ-ಮುಂಡರ ಶಿರಗಳನ್ನು ಬಲಿಯಾಗಿ ತಂದೊಪ್ಪಿಸಿದೆಯೋ ಆ ಕಾರಣದಿಂದ ನೀನು ಇನ್ನು ಮುಂದೆ ಚಾಮುಂಡಿಯೆಂದು ಲೋಕದಲ್ಲಿ ಖ್ಯಾತಿಯನ್ನು ಹೊಂದುತ್ತೀಯೆ.

ಮಾರ್ಕಂಡೇಯ ಮಹಾಪುರಾಣದಲ್ಲಿ ಎಂಭತ್ತನಾಲ್ಕನೆಯ ಅಧ್ಯಾಯವು
ಮುಗಿದುದು.

|| ಓಂ ಶ್ರೀ ದುರ್ಗಾಯೈ ನಮಃ ||

# ಮಾರ್ಕಂಡೇಯ ಪುರಾಣಂ

## ಷಡಶೀತಿತಮೋಽಧ್ಯಾಯಃ

### (ರಕ್ತಬೀಜಾಸುರವಧಃ)

**ಋಷಿರುವಾಚ :—**

**ಚಣ್ಡೇ ಚ ನಿಹತೇ ದೈತ್ಯೇ ಮುಣ್ಡೇ ಚ ವಿನಿಪಾತಿತೇ ।**
**ಬಹುಲೇಷು ಚ ಸೈನ್ಯೇಷು ಕ್ಷಯಿತೇಷ್ವಸುರೇಶ್ವರಃ ॥೧॥**

**ತತಃ ಕೋಪಪರಾಧೀನಚೇತಾಃ ಶುಮ್ಭಃ ಪ್ರತಾಪವಾನ್ ।**
**ಉದ್ಯೋಗಂ ಸರ್ವಸೈನ್ಯಾನಾಂ ದೈತ್ಯಾನಾಮಾದಿದೇಶ ಹ ॥೨॥**

---

## ಎಂಭತ್ತೈದನೆಯ ಅಧ್ಯಾಯ

ಋಷಿಯು ಹೀಗೆಂದನು :—

೧. ಅಸುರೇಶ್ವರನಾದ ಶುಂಭಾಸುರನಿಗೆ ದೇವಿಯೊಡನೆ ಯುದ್ಧಹೂಡಿದ ಪರಿಣಾಮವಾಗಿ ಚಂಡಾಸುರನು ಮಡಿದುಹೋದನು. ಮುಂಡಾಸುರನು ಮರಣಹೊಂದಿದನು. ಮತ್ತು ಅನೇಕ ಸೈನ್ಯಭಾಗವು ಕ್ಷಯಿಸಿಹೋಯಿತು.

೨. ತರುವಾಯ ಕೋಪಕ್ಕೆ ಅಧೀನವಾದ ಮಾನಸವುಳ್ಳ ಪರಾಕ್ರಮಿಯಾದ ಶುಂಭಾಸುರನು ಸಮಸ್ತ ಸೈನ್ಯವು ದೇವಿಯೊಡನೆ ಯುದ್ಧಕ್ಕೆ ಹೊರಡುವ ಉದ್ಯೋಗ ಮಾಡುವಂತೆ ದೈತ್ಯರಿಗೆ ಆದೇಶ ಮಾಡಿದನು.

ಅದ್ಯ ಸರ್ವಬಲೈರ್ದೈತ್ಯಾಃ ಷಡಶೀತಿರುದಾಯುಧಾಃ ।
ಕಮ್ಬೂನಾಂ ಚತುರಾಶೀತಿರ್ನಿರ್ಯಾನ್ತು ಸ್ವಬಲೈರ್ವೃತಾಃ ॥೩॥

ಕೋಟಿವೀರ್ಯಾಣಿ ಪಞ್ಚಾಶದಸುರಾಣಾಂ ಕುಲಾನಿ ವೈ ।
ಶತಂ ಕುಲಾನಿ ಧೂಮ್ರಾಣಾಂ ನಿರ್ಗಚ್ಛನ್ತು ಮಮಾಜ್ಞಯಾ ॥೪॥

ಕಾಲಕಾ ದೌರ್ಹೃದಾ ಮೌರ್ಯಾಃ ಕಾಲಕೇಯಾಸ್ತಥಾಸುರಾಃ ।
ಯುದ್ಧಾಯ ಸಜ್ಜಾ ನಿರ್ಯಾನ್ತು ಆಜ್ಞಯಾ ತ್ವರಿತಾ ಮಮ ॥೫॥

ಇತ್ಯಾಜ್ಞಾಪ್ಯಾಸುರಪತಿಃ ಶುಮ್ಭೋ ಭೈರವಶಾಸನಃ ।
ನಿರ್ಜಗಾಮ ಮಹಾಸೈನ್ಯಸಹಸ್ರೈರ್ಬಹುಭಿರ್ವೃತಃ ॥೬॥

---

೩. ಈಗ ನನ್ನ ಆಜ್ಞೆಯಂತೆ ಪ್ರಧಾನರಾದ ಎಂಭತ್ತಾರುಮಂದಿ ರಾಕ್ಷಸರು ಎತ್ತಿದ ಶಸ್ತ್ರವುಳ್ಳವರಾಗಿ ಸಮಸ್ತ ಚತುರಂಗ ಸೈನ್ಯದ ಸಂಗಡ ಯುದ್ಧಕ್ಕೆ ಹೊರಡಲಿ. ಮತ್ತು ಕಂಬು ಎಂಬ ಎಂಭತ್ತುನಾಲ್ಕುಮಂದಿ ರಾಕ್ಷಸರು ತಮ್ಮ ಸೈನ್ಯ ಪರಿವಾರದೊಡನೆ ಹೊರಡಲಿ.

೪. ಕೋಟಿವೀರ್ಯ ಎಂದು ನಾಮಾಂಕಿತವೂ ಮತ್ತು ಆ ಹೆಸರಿಗೆ ತಕ್ಕಂತೆ ಕೋಟಿಸಂಖ್ಯೆಯಷ್ಟು ಅಧಿಕ ವೀರ್ಯವುಳ್ಳವೂ ಆದ ಐವತ್ತು ಅಸುರ ಸಂಘಗಳು ಹೊರಡಲಿ. ಮತ್ತು ಧೂಮ್ರರಾಕ್ಷಸರ ಒಂದು ನೂರು ಗುಂಪುಗಳು ನನ್ನ ಆಜ್ಞೆಯಿಂದ ಈಗ ಹೊರಡಲಿ.

೫. ಹಾಗು ಕಾಲಕ, ದೌರ್ಹೃದ, ಮೌರ್ಯ ಮತ್ತು ಕಾಲಕೇಯ ಎಂಬ ನಾಮಾಂಕಿತರಾದ ಅನೇಕ ಮಂದಿ ಅಸುರರ ತಂಡಗಳು ನನ್ನ ಆಜ್ಞೆಯಂತೆ ಈಗ ಯುದ್ಧಕ್ಕೆ ಸಿದ್ಧರಾಗಿ ಹೊರಡಲಿ.

೬. ಹೀಗೆಂದು ಆಜ್ಞಾಪಿಸಿ ಭಯಂಕರವಾದ ಶಾಸನವುಳ್ಳ ಅಸುರ-ರಾಜನಾದ ಶುಂಭಾಸುರನು ಸಹಸ್ರಾರು ಸಂಖ್ಯೆಯ ಅನೇಕ ಚತುರಂಗ ಸೈನ್ಯ-ಸಮೇತನಾಗಿ ತಾನು ಯುದ್ಧಕ್ಕೆ ಸಿದ್ಧನಾಗಿ ಹೊರಟನು.

ಆಯಾನ್ತಂ ಚಣ್ಡಿಕಾ ದೃಷ್ಟ್ವಾ ತತ್ಸೈನ್ಯಮತಿಭೀಷಣಮ್ ।
ಜ್ಯಾಸ್ವನೈಃ ಪೂರಯಾಮಾಸ ಧರಣೀಗಗನಾನ್ತರಮ್ ॥೭॥

ಸ ಚ ಸಿಹ್ಮೋ ಮಹಾನಾದಮತೀವ ಕೃತವಾನ್ನೃಪ ।
ಘಣ್ಟಾಸ್ವನೇನ ತನ್ನಾದಮಮ್ಬಿಕಾ ಚಾಪ್ಯಬೃಹ್ಮಯತ್ ॥೮॥

ಧನುರ್ಜ್ಯಾಸಿಹ್ಮಘಣ್ಟಾನಾಂ ನಾದಾಪೂರಿತದಿಙ್ಮುಖಾ ।
ನಿನಾದೈರ್ಭೀಷಣೈಃ ಕಾಲೀ ಜಿಗ್ಯೇ ವಿಸ್ತಾರಿತಾನನಾ ॥೯॥

ತನ್ನಿನಾದಮುಪಶ್ರುತ್ಯ ದೈತ್ಯಸೈನ್ಯೈಶ್ಚತುರ್ದಿಶಮ್ ।
ದೇವೀ ಸಿಹ್ಮಸ್ತಥಾ ಕಾಲೀ ಶರೌಘೈಃ ಪರಿವಾರಿತಾಃ ॥೧೦॥

ಏತಸ್ಮಿನ್ನನ್ತರೇ ಭೂಪ ವಿನಾಶಾಯ ಸುರದ್ವಿಷಾಮ್ ।
ಭವಾಯಾಮರಸಿಹ್ಮಾನಾಮತಿವೀರ್ಯಬಲಾನ್ವಿತಾಃ ॥೧೧॥

---

೭. ಇಷ್ಟರಲ್ಲಿ ಚಂಡಿಕಾದೇವಿಯು ತನ್ನೆದುರು ಯುದ್ಧಕ್ಕೆ ಬರುತ್ತಿದ್ದ ಅತಿ ಭಯಂಕರವಾದ ಆ ಸೈನ್ಯವನ್ನು ನೋಡಿ ಬಿಲ್ಲನ್ನು ಹೆದೆಯೇರಿಸಿ ಬಿಲ್ಲಿನ ಟಂಕಾರಶಬ್ದದಿಂದ ಭೂಮಿ ಆಕಾಶಗಳ ಬಿಲವನ್ನೆಲ್ಲ ತುಂಬಿಸಿದಳು.

೮. ಎಲೈ, ಸುರಥರಾಜನೇ! ಆಗ ದೇವಿಯ ವಾಹನವಾದ ಸಿಹ್ಮವು ಗಟ್ಟಿಯಾದ ಗರ್ಜನವನ್ನು ಮಾಡಿತು. ದೇವಿಯು ಆ ಸಿಹ್ಮನಾದವನ್ನು ತನ್ನ ಉಗ್ರವಾದ ಘಂಟೆಯ ಧ್ವನಿಯಿಂದ ಹೆಚ್ಚಿಸಿದಳು.

೯. ಬಿಲ್ಲಿನ ಟಂಕಾರಶಬ್ದ, ಸಿಂಹದ ಗರ್ಜನೆ, ಘಂಟಾಧ್ವನಿ—ಈ ನಾದಗಳಿಂದ ತುಂಬಿಸಿದ ದಿಗಂತವುಳ್ಳ ಕಾಳಿಕಾದೇವಿಯು ತೆರೆದ ಮುಖವುಳ್ಳವ-ಳಾಗಿ ಭಯವುಂಟುಮಾಡುವ ಶಬ್ದಗಳಿಂದಲೆ ಶತ್ರುಗಳನ್ನು ಹಿಮ್ಮೆಟ್ಟಿಸಿದಳು.

೧೦. ಆದರೂ ಹೀಗೆ ಕೋಲಾಹಲವನ್ನು ಕೇಳಿ ರಚ್ಚೆಗೆದ್ದ ದೈತ್ಯ-ಸೈನ್ಯಗಳಿಂದ ತತ್‌ಕ್ಷಣದಲ್ಲಿ ದೇವಿಯು ಸಿಂಹ ಮತ್ತು ಕಾಲಿಕಾದೇವಿಯರು ಬಾಣವೃಷ್ಟಿಯನ್ನು ಸುರಿಸಿ ನಾಲ್ಕು ದಿಕ್ಕಿನಿಂದಲೂ ಮುಚ್ಚಲ್ಪಟ್ಟರು.

೧೧. ಸುರಥರಾಜನೆ! ಈ ವಿಷಮ ಸಮಯದಲ್ಲಿ ದೇವತೆಗಳ ನಿಸರ್ಗ-ಶತ್ರುಗಳಾದ ರಾಕ್ಷಸರ ಸಂಹಾರಕ್ಕೂ ಮತ್ತು ದೇವತಾಪ್ರಮುಖರ ಸಂಪತ್ಸ-ಮೃದ್ಧಿಗೂ ಅತಿಯಾದ ವೀರ್ಯ-ಪರಾಕ್ರಮಗಳಿಂದ ಕೂಡಿದ ಶಕ್ತಿದೇವತೆಗಳು ಬಂದು ಒಟ್ಟಾಗಿ ಸೇರಿದರು.

ಬ್ರಹ್ಮೇಶಗುಹವಿಷ್ಣೂನಾಂ ತಥೇನ್ದ್ರಸ್ಯ ಚ ಶಕ್ತಯಃ ।
ಶರೀರೇಭ್ಯೋ ವಿನಿಷ್ಕ್ರಮ್ಯ ತದ್ರೂಪೈಶ್ಚಣ್ಡಿಕಾಂ ಯಯುಃ ॥೧೨॥

ಯಸ್ಯ ದೇವಸ್ಯ ಯದ್ರೂಪಂ ಯಥಾ ಭೂಷಣವಾಹನಮ್ ।
ತದ್ವದೇವ ಹಿ ತಚ್ಛಕ್ತಿರಸುರಾನ್ ಯೋದ್ಧುಮಾಯಯೌ ॥೧೩॥

ಹಂಸಯುಕ್ತವಿಮಾನಸ್ಥಾ ಸಾಕ್ಷಸೂತ್ರಕಮಣ್ಡಲುಃ ।
ಆಯಾತಾ ಬ್ರಹ್ಮಣಃ ಶಕ್ತಿರ್ಬ್ರಹ್ಮಾಣೀ ಸಾಭಿಧೀಯತೇ ॥೧೪॥

ಮಾಹೇಶ್ವರೀ ವೃಷಾರೂಢಾ ತ್ರಿಶೂಲವರಧಾರಿಣೀ ।
ಮಹಾಹಿವಲಯಾ ಪ್ರಾಪ್ತಾ ಚನ್ದ್ರಲೇಖಾವಿಭೂಷಣಾ ॥೧೫॥

---

೧೨. ಬ್ರಹ್ಮ-ಈಶ್ವರ-ಕುಮಾರಸ್ವಾಮಿ-ವಿಷ್ಣು-ಇಂದ್ರ ಮುಂತಾದ ದೇವತೆಗಳ ಶಕ್ತಿಗಳು ಆಯಾಯ ದೇವತಾ ಮೂರ್ತಿಗಳಿಂದ ಆಯಾಯ ರೂಪದಿಂದ ಪ್ರತ್ಯೇಕವಾಗಿ ಆವಿರ್ಭವಿಸಿ ಚಂಡಿಕಾಂಬಿಕೆಯ ಬಳಿಯಲ್ಲಿ ಸೇರಿದರು.

೧೩. ಬ್ರಹ್ಮಾದಿ ದೇವತೆಗಳ ಪೈಕಿ ಯಾವ ದೇವತೆಯಲ್ಲಿ ಯಾವ ರೂಪ-ಭೂಷಣ-ವಾಹನಗಳು ಇವೆಯೋ ಅದೇ ರೂಪ-ಭೂಷಣ-ವಾಹನಗಳನ್ನು ಹೊಂದಿದ ಆ ದೇವತಾಶಕ್ತಿಯು ಅಸುರರೊಂದಿಗೆ ಯುದ್ಧಮಾಡಲು ಬಂದು ಸೇರಿದಳು.

೧೪. ಹಂಸವಾಹನದಿಂದ ಕೂಡಿದ ವಿಮಾನದಲ್ಲಿರುವವಳೂ, ಜಪಮಾಲೆ-ಕಮಂಡಲುಗಳನ್ನು ಧರಿಸಿದವಳೂ ಆಗಿ ಬಂದಿರುವ ಬ್ರಹ್ಮದೇವನ ಶಕ್ತಿಯು ಬ್ರಹ್ಮಾಣಿ ಎಂದು ಕರೆಯಲ್ಪಡುವಳು.

೧೫. ಮತ್ತು ನಂದಿವಾಹನವನ್ನು ಏರಿದವಳೂ ಉತ್ತಮವಾದ ತ್ರಿಶೂಲವನ್ನು ಧರಿಸಿದವಳೂ ದೊಡ್ಡ ಸರ್ಪಗಳ ಕಂಕಣವುಳ್ಳವಳೂ ಮತ್ತು ಚಂದ್ರಕಲೆಯಿಂದ ರಾಜಿಸುವ ಶಿರವುಳ್ಳವಳೂ ಆಗಿ ಬಂದ ಶಕ್ತಿದೇವಿಯು ಮಾಹೇಶ್ವರಿ ಎಂದು ಕರೆಯಲ್ಪಡುವಳು.

ಕೌಮಾರೀ ಶಕ್ತಿಹಸ್ತಾ ಚ ಮಯೂರವರವಾಹನಾ ।
ಯೋದ್ಧುಮಭ್ಯಾಯಯೌ ದೈತ್ಯಾನಮ್ಬಿಕಾ ಗುಹರೂಪಿಣೀ ॥೧೬॥

ತಥೈವ ವೈಷ್ಣವೀ ಶಕ್ತಿರ್ಗರುಡೋಪರಿಸಂಸ್ಥಿತಾ ।
ಶಙ್ಖಚಕ್ರಗದಾಶಾರ್ಙ್ಗಖಡ್ಗಹಸ್ತಾಭ್ಯುಪಾಯಯೌ ॥೧೭॥

ಯಜ್ಞವಾರಾಹಮತುಲಂ ರೂಪಂ ಯಾ ಬಿಭ್ರತೋ ಹರೇಃ ।
ಶಕ್ತಿಃ ಸಾಪ್ಯಾಯಯೌ ತತ್ರ ವಾರಾಹೀಂ ಬಿಭ್ರತೀ ತನುಮ್ ॥೧೮॥

ನಾರಸಿಂಹೀ ನೃಸಿಂಹಸ್ಯ ಬಿಭ್ರತೀ ಸದೃಶಂ ವಪುಃ ।
ಪ್ರಾಪ್ತಾ ತತ್ರ ಸಟಾಕ್ಷೇಪಕ್ಷಿಪ್ತನಕ್ಷತ್ರಸಂಹತಿಃ ॥೧೯॥

---

೧೬. ಹಾಗು ಶಕ್ತಿ ಆಯುಧವನ್ನು ಪಾಣಿಯಲ್ಲಿ ಧರಿಸಿದವಳೂ, ಉತ್ತಮವಾದ ನವಿಲು ವಾಹನವನ್ನು ಏರಿದವಳೂ ಮತ್ತು ಕುಮಾರಸ್ವಾಮಿಯ ರೂಪದಿಂದ ಶೋಭಿತಳೂ ಆದ ಅಂಬಿಕೆಯ ವ್ಯಷ್ಟಿರೂಪವಾದ ಕೌಮಾರೀ ಶಕ್ತಿಯು ದೈತ್ಯರ ಸಂಗಡ ಯುದ್ಧಮಾಡಲು ಬಂದಳು.

೧೭. ಹಾಗೆಯೇ ಗರುಡವಾಹನದ ಮೇಲೆ ಕುಳಿತಿರುವವಳೂ, ಶಂಖ-ಚಕ್ರ-ಗದಾ-ಶಾರ್ಙ್ಗ ಮತ್ತು ಖಡ್ಗಗಳೆಂಬ ಉಪಕರಣಗಳನ್ನು ಧರಿಸಿದವಳೂ ಆದ ವೈಷ್ಣವೀಶಕ್ತಿಯು ದೈತ್ಯರನ್ನು ನಾಶಮಾಡಲು ಬಂದಳು.

೧೮. ಯಜ್ಞರಕ್ಷಣೆಗಾಗಿ ನಿರುಪಮವಾದ ವರಾಹರೂಪವನ್ನು ಧರಿಸಿದ ವಿಷ್ಣುವಿನ ಮೂರ್ತಿಯಿಂದ ಯಾವ ಶಕ್ತಿಯು ಆವಿರ್ಭವಿಸಿದಳೋ, ವರಾಹ-ಮೂರ್ತಿಯ ಆಕೃತಿಯನ್ನು ಧರಿಸಿದ ಆ ವಾರಾಹೀಶಕ್ತಿಯು ಯುದ್ಧರಂಗಕ್ಕೆ ಬಂದಳು.

೧೯. ಹಾಗು ನೃಸಿಂಹಸ್ವಾಮಿಯ ಆಕಾರವನ್ನು ಧರಿಸಿರುವವಳೂ ಮತ್ತು ತನ್ನ ಕೇಸರಗಳನ್ನು ಕೊಡವಿಕೊಂಡು ದೂರ ಒತ್ತರಿಸಿದ ನಕ್ಷತ್ರ-ಶ್ರೇಣಿಗಳುಳ್ಳವಳೂ ಆದ ನಾರಸಿಂಹೀ ಶಕ್ತಿಯು ಆ ಸಂಗ್ರಾಮಭೂಮಿಗೆ ಬಂದಳು.

ವಜ್ರಹಸ್ತಾ ತಥೈವೈನ್ದ್ರೀ ಗಜರಾಜೋಪರಿಸ್ಥಿತಾ ।
ಸಹಸ್ರನಯನಾ ಪ್ರಾಪ್ತಾ ಯಥಾ ಶಕ್ರಸ್ತಥೈವ ಸಾ ॥೨೦॥

ತತಃ ಪರಿವೃತಸ್ತಾಭಿರೀಶಾನೋ ದೇವಶಕ್ತಿಭಿಃ ।
ಹನ್ಯನ್ತಾಮಸುರಾಃ ಶೀಘ್ರಂ ಮಮ ಪ್ರೀತ್ಯಾಹ ಚಣ್ಡಿಕಾಮ್॥೨೧॥

ತತೋ ದೇವೀಶರೀರಾತ್ತು ವಿನಿಷ್ಕ್ರಾನ್ತಾತಿಭೀಷಣಾ ।
ಚಣ್ಡಿಕಾಶಕ್ತಿರತ್ಯುಗ್ರಾ ಶಿವಾಶತನಿನಾದಿನೀ ॥೨೨॥

ಸಾ ಚಾಹ ಧೂಮ್ರಜಟಿಲಮೀಶಾನಮಪರಾಜಿತಾ ।
ದೂತತ್ವಂ ಗಚ್ಛ ಭಗವನ್ ಪಾರ್ಶ್ವಂ ಶುಮ್ಭನಿಶುಮ್ಭಯೋಃ ॥೨೩॥

---

೨೦. ದೇವೇಂದ್ರನ ಮೂರ್ತಿಯು ಎಂತಿರುವುದೋ ಅಂತೆಯೇ ಸಹಸ್ರ ನೇತ್ರಗಳಿಂದ ಕೂಡಿರುವವಳೂ, ವಜ್ರಾಯುಧವನ್ನು ಕೈಯಲ್ಲಿ ಧರಿಸಿದವಳೂ ಮತ್ತು ಐರಾವತ ಗಜವಾಹನವನ್ನು ಏರಿದವಳೂ ಆದ ಐಂದ್ರೀ ಶಕ್ತಿಯು ಬಂದಳು.

೨೧. ತರುವಾಯ ಬ್ರಹ್ಮಾಣೀ ಮುಂತಾದ ದೇವಶಕ್ತಿಗಳಿಂದ ಸುತ್ತಲೂ ಆವರಿಸಲ್ಪಟ್ಟ ಮಹೇಶ್ವರನು " ನನ್ನ ಪ್ರೀತಿ ನಿಮಿತ್ತವಾಗಿ ಸಮಸ್ತ ರಾಕ್ಷಸರು ನಿನ್ನಿಂದ ಶೀಘ್ರವಾಗಿ ಸಂಹರಿಸಲ್ಪಡಲಿ " ಎಂದು ಚಂಡಿಕಾಂಬಿಕೆಗೆ ಹೇಳಿದನು.

೨೨. ಅನಂತರದಲ್ಲಿ ಹೆಚ್ಚಾಗಿ ಉಗ್ರರೂಪಳೂ, ನೂರಾರು ನರಿಗಳ ಕಠೋರ ನಾದದಿಂದ ಕೂಡಿದವಳೂ ಮತ್ತು ಭಯಂಕರಳೂ ಆದ ಚಂಡಿಕಾ ಶಕ್ತಿಯು ದೇವಿಯ ದೇಹದಿಂದ ಪ್ರತ್ಯೇಕವಾಗಿ ಆವಿರ್ಭವಿಸಿದಳು.

೨೩. ಪರಾಜಯವಿಲ್ಲದ ವಿಕ್ರಮವುಳ್ಳ, ವಿಷ್ಣುಮಾಯೆಯೆಂದು ಕರೆಯಲ್ಪಡುವ ಆ ಚಂಡಿಕಾದೇವಿಯು ಧೂಮ್ರವರ್ಣದ ಜಡೆಗಳನ್ನು ಧರಿಸಿದ ರುದ್ರನನ್ನು ನೋಡಿ " ಪೂಜ್ಯನೇ ! ನೀನೀಗ ಶುಂಭ-ನಿಶುಂಭ ಅಸುರರ ಬಳಿಗೆ ದೂತನಾಗಿ ಹೋಗು " ಎಂದು ಹೇಳಿದಳು.

ಬ್ರೂಹಿ ಶುಮ್ಭಂ ನಿಶುಮ್ಭಂ ಚ ದಾನವಾವತಿಗರ್ವಿತೌ ।
ಯೇ ಚಾನ್ಯೇ ದಾನವಾಸ್ತತ್ರ ಯುದ್ಧಾಯ ಸಮುಪಸ್ಥಿತಾಃ ॥೨೪॥

ತ್ರೈಲೋಕ್ಯಮಿನ್ದ್ರೋ ಲಭತಾಂ ದೇವಾಃ ಸನ್ತು ಹವಿರ್ಭುಜಃ ।
ಯೂಯಂ ಪ್ರಯಾತ ಪಾತಾಲಂ ಯದಿ ಜೀವಿತುಮಿಚ್ಛಥ ॥೨೫॥

ಬಲಾವಲೇಪಾದಥ ಚೇದ್ಭವನ್ತೋ ಯುದ್ಧಕಾಙ್ಕ್ಷಿಣಃ ।
ತದಾಗಚ್ಛತ ತೃಪ್ಯನ್ತು ಮಚ್ಛಿವಾಃ ಪಿಶಿತೇನ ವಃ ॥೨೬॥

ಯತೋ ನಿಯುಕ್ತೋ ದೂತ್ಯೇನ ತಯಾ ದೇವ್ಯಾ ಶಿವಃ ಸ್ವಯಮ್ ।
ಶಿವದೂತೀತಿ ಲೋಕೇಽಸ್ಮಿಂಸ್ತತಃ ಸಾ ಖ್ಯಾತಿಮಾಗತಾ ॥೨೭॥

---

೨೪. ಅಸುರರಾಜನ ಬಳಿಗೆ ಹೋಗಿ ಶುಂಭ-ನಿಶುಂಭರೆಂಬ ಅಹಂಕಾರದಿಂದ ಮೆರೆಯುವ ದಾನವರಿಗೂ ಮತ್ತು ಯುದ್ಧಕ್ಕೋಸ್ಕರವೇ ಸಿದ್ಧವಾಗಿರುವ ಇತರ ದಾನವರಿಗೂ ನನ್ನ ಈ ಸಂದೇಶವನ್ನು ಹೇಳು.

೨೫. ಇಂದ್ರನು ದೇವರಾಜ ಪದದಲ್ಲಿದ್ದು ತ್ರೈಲೋಕ್ಯ ರಾಜ್ಯವನ್ನು ಹೊಂದಲಿ. ದೇವತೆಗಳು ತಮ್ಮ ತಮ್ಮ ಹವಿರ್ಭಾಗಗಳನ್ನು ಮತ್ತೆ ಭುಂಜಿಸಲಿ. ನೀವು ದೀರ್ಘಕಾಲ ಬದುಕಿನ ಆಶೆಯುಳ್ಳವರಾಗಿದ್ದರೆ ಕೂಡಲೆ ಪಾತಾಳಕ್ಕೆ ಹೊರಟುಹೋಗಿ.

೨೬. ಒಂದು ಪಕ್ಷದಲ್ಲಿ ಶಕ್ತಿ-ಸಾಮರ್ಥ್ಯಗಳ ಅಹಂಕಾರದಿಂದ ನೀವೆಲ್ಲರೂ ಯುದ್ಧಮಾಡಲು ಬಯಸುವುದಾದರೆ ಕೂಡಲೆ ಯುದ್ಧಕ್ಕೆ ಬನ್ನಿರಿ. ಯುದ್ಧದಲ್ಲಿ ಹತರಾದ ನಿಮ್ಮ ರಕ್ತ-ಮಾಂಸಗಳಿಂದ ನನ್ನ ನರಿಗಳ ತಂಡಗಳು ತೃಪ್ತಿಹೊಂದಲಿ.

೨೭. ಹೀಗೆ ಸಂದೇಶವನ್ನು ಕಳುಹಿಸುತ್ತ ಚಂಡಿಕಾಂಬಿಕೆಯಿಂದ ಈಶ್ವರನು ದೂತನಾಗಿ ನಿಯೋಜಿಸಲ್ಪಟ್ಟನಾದುದರಿಂದ ಆ ದೇವಿಯು ಈ ಸಮಸ್ತಲೋಕದಲ್ಲಿ ಶಿವದೂತಿಯೆಂದು ಖ್ಯಾತಿಯನ್ನು ಹೊಂದಿದಳು.

ತೇಽಪಿ ಶ್ರುತ್ವಾ ವಚೋ ದೇವ್ಯಾಃ ಶರ್ವಾಖ್ಯಾತಂ ಮಹಾಸುರಾಃ ।
ಅಮರ್ಷಾಪೂರಿತಾ ಜಗ್ಮುರ್ಯತ್ರ ಕಾತ್ಯಾಯನೀ ಸ್ಥಿತಾ ॥೨೮॥

ತತಃ ಪ್ರಥಮಮೇವಾಗ್ರೇ ಶರಶಕ್ತ್ಯೃಷ್ಟಿವೃಷ್ಟಿಭಿಃ ।
ವವರ್ಷುರುದ್ಧತಾಮರ್ಷಾಸ್ತಾಂ ದೇವೀಮಮರಾರಯಃ ॥೨೯॥

ಸಾ ಚ ತಾನ್ ಪ್ರಹಿತಾನ್ಬಾಣಾನ್ ಶೂಲಶಕ್ತಿಪರಶ್ವಧಾನ್ ।
ಚಿಚ್ಛೇದ ಲೀಲಯಾಧ್ಮಾತಧನುರ್ಮುಕ್ತೈರ್ಮಹೇಷುಭಿಃ ॥೩೦॥

ತಸ್ಯಾಗ್ರತಸ್ತಥಾ ಕಾಲೀ ಶೂಲಪಾತವಿದಾರಿತಾನ್ ।
ಖಟ್ವಾಙ್ಗಪೋಥಿತಾಂಶ್ಚಾರೀನ್ಕುರ್ವತೀ ವ್ಯಚರತ್ತದಾ ॥೩೧॥

---

೨೮. ಆಗ ವೀರರಾದ ಅಸುರರೆಲ್ಲರೂ ಈಶ್ವರನು ಒಪ್ಪಿಸಿದ ದೇವಿಯ ಸಂದೇಶವಾಣಿಯನ್ನು ಕೇಳಿ ಕೋಪ-ಅಸಹನೆಗಳಿಂದ ಪರಿಪೂರ್ಣರಾಗಿ ಎಲ್ಲಿ ಕಾತ್ಯಾಯನೀ ಎಂದು ಕರೆಯಲ್ಪಡುವ ಚಂಡಿಕಾಂಬಿಕೆಯು ಇದ್ದಳೊ ಅಲ್ಲಿಗೆ ಬಂದರು.

೨೯. ತರುವಾಯ ಮದದಿಂದ ಕೊಬ್ಬಿದ ಮತ್ತು ಕೋಪಾವೇಶವುಳ್ಳ ದಾನವರು ತಾವು ಮೊದಲು ಬಾಣ-ಶಕ್ತಿ-ಋಷ್ಟಿ ಮುಂತಾದ ಶಸ್ತ್ರಾಸ್ತ್ರಗಳನ್ನು ದೇವಿಯ ಮೇಲೆ ಸುರಿಸಿದರು.

೩೦. ಆಗ ಚಂಡಿಕಾದೇವಿಯು ಅಸುರರು ಪ್ರಯೋಗಿಸಿದ ಬಾಣ, ಶೂಲ, ಶಕ್ತಿ, ಪರಶು ಮುಂತಾದ ಶಸ್ತ್ರಾಸ್ತ್ರಗಳನ್ನು ಲೀಲೆಯಿಂದ ಹೆದೆಯೇರಿಸಿದ ಬಿಲ್ಲಿನಲ್ಲಿಟ್ಟು ಪ್ರಯೋಗಿಸಿದ ತನ್ನ ದೊಡ್ಡ ಬಾಣವೃಷ್ಟಿಯಿಂದ ಕತ್ತರಿಸಿದಳು.

೩೧. ಆಗ ಚಂಡಿಕಾಂಬಿಕೆಯ ಮುಂದುಗಡೆಯಲ್ಲಿ ಕಾಲೀದೇವಿಯು ಅನೇಕ ದಾನವರನ್ನು ತನ್ನ ಶೂಲಾಯುಧವನ್ನು ಚುಚ್ಚಿ ಸೀಳುತ್ತಲೂ ಖಟ್ವಾಂಗಾಯುಧದಿಂದ ಬಡಿದು ಉರುಳಿಸುತ್ತಲೂ ರಣರಂಗದಲ್ಲಿ ಸಂಚರಿಸಿದಳು.

ಕಮಣ್ಡಲುಜಲಾಕ್ಷೇಪಹತವೀರ್ಯಾನ್ ಹತೌಜಸಃ ।
ಬ್ರಹ್ಮಾಣೀ ಚಾಕರೋಚ್ಛತ್ರೂನ್ ಯೇನ ಯೇನ ಸ್ಮ ಧಾವತಿ ॥೩೨॥

ಮಾಹೇಶ್ವರೀ ತ್ರಿಶೂಲೇನ ತಥಾ ಚಕ್ರೇಣ ವೈಷ್ಣವೀ ।
ದೈತ್ಯಾಞ್ಜಘಾನ ಕೌಮಾರೀ ತಥಾ ಶಕ್ತ್ಯಾತಿಕೋಪನಾ ॥೩೩॥

ಐನ್ದ್ರೀಕುಲಿಶಪಾತೇನ ಶತಶೋ ದೈತ್ಯದಾನವಾಃ ।
ಪೇತುರ್ವಿದಾರಿತಾಃ ಪೃಥ್ವ್ಯಾಂ ರುಧಿರೌಘಪ್ರವರ್ಷಿಣಃ ॥೩೪॥

ತುಣ್ಡಪ್ರಹಾರವಿಧ್ವಸ್ತಾ ದಂಷ್ಟ್ರಾಗ್ರಕ್ಷತವಕ್ಷಸಃ ।
ವಾರಾಹಮೂರ್ತ್ಯಾ ನ್ಯಪತಂಶ್ಚಕ್ರೇಣ ಚ ವಿದಾರಿತಾಃ ॥೩೫॥

---

೩೨. ಈ ಸಮಯದಲ್ಲಿ ಬ್ರಹ್ಮಾಣೀ ಶಕ್ತಿಯು ಯಾವ ಯಾವ ಸ್ಥಳದಲ್ಲಿ ಧಾವಿಸಿದಳೊ ಅಲ್ಲೆಲ್ಲ ಶತ್ರುಗಳಾದ ದಾನವರಲ್ಲಿ ಕಮಂಡಲುವಿನ ನೀರನ್ನು ಎರಚುವುದರಿಂದ ವೀರ್ಯ-ತೇಜಸ್ಸುಗಳು ಭಂಗವಾಗುವಂತೆ ಮಾಡಿದಳು.

೩೩. ಹಾಗೆಯೇ ಮಾಹೇಶ್ವರೀ ಶಕ್ತಿಯು ತ್ರಿಶೂಲಾಯುಧದಿಂದಲೂ, ವೈಷ್ಣವೀ ಶಕ್ತಿಯು ಚಕ್ರಾಯುಧದಿಂದಲೂ, ಮತ್ತು ಶತ್ರುಗಳಲ್ಲಿ ಬಲುಕೋಪ-ತಾಳಿದ ಕೌಮಾರೀ ಶಕ್ತಿಯು ಶಕ್ತ್ಯಾಯುಧದಿಂದಲೂ ಅನೇಕ ದೈತ್ಯರನ್ನು ಸಂಹರಿಸಿದರು.

೩೪. ಐಂದ್ರೀ ಶಕ್ತಿಯ ವಜ್ರಾಯುಧದಿಂದ ಭೇದಿಸಲ್ಪಟ್ಟ ಅನೇಕ ಮಂದಿ ದೈತ್ಯ-ದಾನವರು ರಕ್ತಪ್ರವಾಹವನ್ನು ಭೂಮಿಯಲ್ಲಿ ಸುರಿಸುತ್ತ ಕೆಳಕ್ಕೆ ಉರುಳಿದರು.

೩೫. ಮತ್ತು ವಾರಾಹೀ ಮೂರ್ತಿಯ ಮೂತಿಯ ತಿವಿತದಿಂದ ಧ್ವಂಸ-ಹೊಂದಿದವರೂ ಕೋರೆಹಲ್ಲುಗಳ ಅಗ್ರಗಳಿಂದ ಚುಚ್ಚಲ್ಪಟ್ಟವರೂ ಮತ್ತು ಚಕ್ರಾಯುಧದಿಂದ ಸೀಳಲ್ಪಟ್ಟವರೂ ಆಗಿ ಅನೇಕ ದಾನವರು ಬಿದ್ದುಹೋದರು.

ನಖೈರ್ವಿದಾರಿತಾಂಶ್ಚಾನ್ಯಾನ್ಭಕ್ಷಯನ್ತೀ ಮಹಾಸುರಾನ್ ।
ನಾರಸಿಂಹೀ ಚಚಾರಾಜೌ ನಾದಾಪೂರ್ಣದಿಗನ್ತರಾ ॥೩೬॥

ಚಣ್ಡಾಟ್ಟಹಾಸೈರಸುರಾಃ ಶಿವದೂತ್ಯಭಿದೂಷಿತಾಃ ।
ಪೇತುಃ ಪೃಥಿವ್ಯಾಂ ಪತಿತಾಂಸ್ತಾಂಶ್ಚಖಾದಾಥ ಸಾ ತದಾ ॥೩೭॥

ಇತಿ ಮಾತೃಗಣಂ ಕ್ರುದ್ಧಂ ಮರ್ದಯನ್ತಂ ಮಹಾಸುರಾನ್ ।
ದೃಷ್ಟ್ವಾಭ್ಯುಪಾಯೈರ್ವಿವಿಧೈರ್ನೇಶುರ್ದೇವಾರಿಸೈನಿಕಾಃ ॥೩೮॥

ಪಲಾಯನಪರಾನ್ದೃಷ್ಟ್ವಾ ದೈತ್ಯಾನ್ ಮಾತೃಗಣಾರ್ದಿತಾನ್ ।
ಯೋದ್ಧುಮಭ್ಯಾಯಯೌ ಕ್ರುದ್ಧೋ ರಕ್ತಬೀಜೋ ಮಹಾಸುರಃ ॥೩೯॥

---

೩೬. ಒಂದು ಕಡೆಯಲ್ಲಿ ನಾರಸಿಂಹೀ ಶಕ್ತಿಯು ತನ್ನ ಉಗುರುಗಳಿಂದ ಎದೆಬಗೆದು ಅನೇಕ ಅಸುರರನ್ನು ತಿನ್ನುತ್ತ ಸಿಂಹನಾದದಿಂದ ದಿಕ್ಕು-ಮೂಲೆ-ಗಳನ್ನು ನಡುಗಿಸುತ್ತ ರಣರಂಗದಲ್ಲಿ ಓಡಾಡಿದಳು.

೩೭. ಶಿವದೂತಿಯೆನಿಸಿದ, ಚಂಡಿಕಾ ಮೂರ್ತಿಯಿಂದ ಉದ್ಭವಿಸಿದ ಶಕ್ತಿಯು ಮಾಡಿದ ಅಟ್ಟಹಾಸ ಪ್ರಭಾವದಿಂದ ಎಷ್ಟೋ ಮಂದಿ ರಾಕ್ಷಸರು ಕೆಳಗೆ ಬಿದ್ದರು. ಆಗ ಆ ದೇವಿಯು ಅಸುರರನ್ನು ನುಂಗಿಹಾಕಿದಳು.

೩೮. ಹೀಗೆ ಬಗೆಬಗೆಯ ಸಾಧನಗಳಿಂದ ಎಲ್ಲೆಲ್ಲೂ ಅಸುರಗಣವನ್ನು ಮರ್ದನ ಮಾಡುತ್ತಿದ್ದ ಕೋಪಾವೇಶಗೊಂಡ ಬ್ರಾಹ್ಮೀ ಮುಂತಾದ ಮಾತೃ-ದೇವತಾಗಣವನ್ನು ನೋಡಿ ದೇವಶತ್ರುಗಳಾದ ರಾಕ್ಷಸ ಸೈನಿಕರು ಅನೇಕ ಮಂದಿ ಮಡಿದರು.

೩೯. ಹೀಗೆ ಮಾತೃದೇವತಾಗಣದಿಂದ ಪೀಡಿತರಾಗಿ ನಿಲ್ಲಲಾರದೆ ದೈತ್ಯರು ರಣರಂಗದಿಂದ ಓಡಲಾರಂಭಿಸಿದುದನ್ನು ನೋಡಿ ಬಹಳ ಕೋಪಗೊಂಡ ರಕ್ತಬೀಜನೆಂಬ ಮಹಾಅಸುರನು ತಾನು ಯುದ್ಧಮಾಡಲು ಮುಂದೆ ಬಂದನು.

ರಕ್ತಬಿನ್ದುರ್ಯದಾ ಭೂಮೌ ಪತತ್ಯಸ್ಯ ಶರೀರತಃ ।
ಸಮುತ್ಪತತಿ ಮೇದಿನ್ಯಾಸ್ತತ್ಪ್ರಮಾಣೋ ಮಹಾಸುರಃ ॥೪೦॥

ಯುಯುಧೇ ಸ ಗದಾಪಾಣಿರಿನ್ದ್ರಶಕ್ತ್ಯಾ ಮಹಾಸುರಃ ।
ತತಶ್ಚೈನ್ದ್ರೀ ಸ್ವವಜ್ರೇಣ ರಕ್ತಬೀಜಮತಾಡಯತ್ ॥೪೧॥

ಕುಲಿಶೇನಾಹತಸ್ಯಾಶು ಬಹು ಸುಸ್ರಾವ ಶೋಣಿತಮ್ ।
ಸಮುತ್ತಸ್ಥುಸ್ತತೋ ಯೋಧಾಸ್ತದ್ರೂಪಾಸ್ತತ್ಪರಾಕ್ರಮಾಃ ॥೪೨॥

ಯಾವನ್ತಃ ಪತಿತಾಸ್ತಸ್ಯ ಶರೀರಾದ್ರಕ್ತಬಿನ್ದವಃ ।
ತಾವನ್ತಃ ಪುರುಷಾ ಜಾತಾಸ್ತದ್ವೀರ್ಯಬಲವಿಕ್ರಮಾಃ ॥೪೩॥

---

೪೦. ರಕ್ತಬೀಜಾಸುರನ ದೇಹದಿಂದ ಯಾವಾಗ ಒಂದು ತೊಟ್ಟು ರಕ್ತವು ನೆಲದಲ್ಲಿ ಬೀಳುವುದೋ ಆಗ ಆ ರಕ್ತದ ಬಿಂದುವಿನಿಂದ ಆ ಅಸುರನ ಪ್ರಮಾಣವಂತಿದ್ದ ಮತ್ತೊಬ್ಬ ಅಸುರನು ನೆಲದಿಂದ ಹುಟ್ಟಿಬರುವನು. ಇದೊಂದು ರಕ್ತಬೀಜಾಸುರನ ಮಹಿಮೆಯಿದ್ದಿತು.

೪೧. ಅಂತಹ ರಕ್ತಬೀಜಾಸುರನು ಕೈಯಲ್ಲಿ ಗದೆಯನ್ನು ಧರಿಸಿ ಇಂದ್ರನ ಶಕ್ತಿಯಾದ ಐಂದ್ರೀ ದೇವಿಯೊಡನೆ ಯುದ್ಧಮಾಡಿದನು. ಐಂದ್ರೀ ಶಕ್ತಿಯು ತನ್ನ ವಜ್ರಾಯುಧದಿಂದ ರಕ್ತಬೀಜನನ್ನು ಪ್ರಹರಿಸಿದಳು.

೪೨. ಆಗ ವಜ್ರಾಯುಧದಿಂದ ಹೊಡೆಯಲ್ಪಟ್ಟ ರಕ್ತಬೀಜನ ದೇಹದಿಂದ ತುಂಬ ರಕ್ತವು ಕೆಳಗೆ ಸುರಿಯಿತು. ಅದರಿಂದ ಅದೇ ರೂಪ-ಅದೇ ಪರಾಕ್ರಮಗಳಿಂದ ಕೂಡಿದ ಅನೇಕ ಮಂದಿ ಯೋಧ ರಾಕ್ಷಸರು ಜನಿಸಿದರು.

೪೩. ಆ ರಕ್ತಬೀಜಾಸುರನ ದೇಹದಿಂದ ಎಷ್ಟು ಸಂಖ್ಯೆಯ ರಕ್ತದ ಬಿಂದುಗಳು ಕೆಳಗೆ ಬಿದ್ದುವೊ ಅಷ್ಟು ಸಂಖ್ಯೆಯ ಯೋಧಪುರುಷರು ಆ ಅಸುರನ ವೀರ್ಯ-ಬಲ-ಪರಾಕ್ರಮಗಳಿಂದ ಕೂಡಿದವರಾಗಿ ಜನಿಸಿದರು.

ತೇ ಚಾಪಿ ಯುಯುಧುಸ್ತತ್ರ ಪುರುಷಾ ರಕ್ತಸಮ್ಭವಾಃ ।
ಸಮಂ ಮಾತೃಭಿರತ್ಯುಗ್ರಂ ಶಸ್ತ್ರಪಾತಾತಿಭೀಷಣಮ್ ॥೪೪॥

ಪುನಶ್ಚ ವಜ್ರಪಾತೇನ ಕ್ಷತಮಸ್ಯ ಶಿರೋ ಯದಾ ।
ವವಾಹ ರಕ್ತಂ ಪುರುಷಾಸ್ತತೋ ಜಾತಾಸ್ಸಹಸ್ರಶಃ ॥೪೫॥

ವೈಷ್ಣವೀ ಸಮರೇ ಚೈನಂ ಚಕ್ರೇಣಾಭಿಜಘಾನ ಹ ।
ಗದಯಾ ತಾಡಯಾಮಾಸ ಐನ್ದ್ರೀ ತಮಸುರೇಶ್ವರಮ್ ॥೪೬॥

ವೈಷ್ಣವೀಚಕ್ರಭಿನ್ನಸ್ಯ ರುಧಿರಸ್ರಾವಸಮ್ಭವೈಃ ।
ಸಹಸ್ರಶೋ ಜಗದ್ವ್ಯಾಪ್ತಂ ತತ್ಪ್ರಮಾಣೈರ್ಮಹಾಸುರೈಃ ॥೪೭॥

ಶಕ್ತ್ಯಾ ಜಘಾನ ಕೌಮಾರೀ ವಾರಾಹೀ ಚ ತಥಾಸಿನಾ ।
ಮಾಹೇಶ್ವರೀ ತ್ರಿಶೂಲೇನ ರಕ್ತಬೀಜಂ ಮಹಾಸುರಮ್ ॥೪೮॥

---

೪೪. ಆ ರಣರಂಗದಲ್ಲಿ ರಕ್ತದ ಬಿಂದುಗಳಿಂದ ಜನಿಸಿದ ಯೋಧ-ರಾಕ್ಷಸರು ಬ್ರಾಹ್ಮೀ ಮುಂತಾದ ಮಾತೃಗಣದ ಸಂಗಡ ಅಧಿಕವಾದ ಶಸ್ತ್ರ-ಪ್ರಹಾರಗಳಿಂದ ಭೀಷಣವೂ ಮತ್ತು ಉಗ್ರವೂ ಆಗಿರುವಂತೆ ಯುದ್ಧ ಮಾಡಿದರು.

೪೫. ಮತ್ತೆ ರಕ್ತಬೀಜಾಸುರನ ತಲೆಯು ಯಾವಾಗ ವಜ್ರಾಯುಧದಿಂದ ಗಾಯಗೊಳಿಸಲ್ಪಟ್ಟಿತೋ ಆಗ ಅಧಿಕವಾಗಿ ರಕ್ತವು ಪ್ರವಹಿಸಿತು. ಅದರಿಂದ ಮತ್ತೆ ಸಾವಿರಾರು ಮಂದಿ ರಾಕ್ಷಸರು ಹುಟ್ಟಿದರು.

೪೬. ಸಮರಾಂಗಣದಲ್ಲಿ ವೈಷ್ಣವೀಶಕ್ತಿಯು ರಕ್ತಬೀಜಾಸುರನನ್ನು ಚಕ್ರಾಯುಧದಿಂದ ಹೊಡೆದಳು. ಹಾಗು ಐಂದ್ರೀಶಕ್ತಿಯು ಅವನನ್ನು ಗದಾ-ಯುಧದಿಂದ ಪ್ರಹರಿಸಿದಳು.

೪೭. ವೈಷ್ಣವೀಶಕ್ತಿಯ ಚಕ್ರಾಯುಧದಿಂದ ಭೇದಿಸಲ್ಪಟ್ಟ ಆ ಅಸುರನಿಂದ ಸುರಿವ ರಕ್ತಪ್ರವಾಹದಿಂದ ಉದ್ಭವಿಸಿದ, ಅದೇ ಪ್ರಮಾಣದ ಸಾವಿರಾರು ಮಂದಿ ಮಹಾ ಅಸುರರಿಂದ ರಣರಂಗದ ಜಗತ್ತು ವ್ಯಾಪಿಸಲ್ಪಟ್ಟಿತು.

೪೮. ಮತ್ತೆ ಕೌಮಾರೀ ಶಕ್ತಿಯು ತನ್ನ ಶಕ್ತ್ಯಾಯುಧದಿಂದ ಹೊಡೆದಳು. ವಾರಾಹೀ ಶಕ್ತಿಯು ಕತ್ತಿಯಿಂದ ಕತ್ತರಿಸಿದಳು. ಮತ್ತು ಮಾಹೇಶ್ವರೀ ಶಕ್ತಿಯು ಆ ರಕ್ತಬೀಜಮಹಾಸುರನನ್ನು ತ್ರಿಶೂಲದಿಂದ ಚುಚ್ಚಿದಳು.

ಸ ಚಾಪಿ ಗದಯಾ ದೈತ್ಯಃ ಸರ್ವಾ ಏವಾಹನತ್ಪೃಥಕ್ ।
ಮಾತೄಃ ಕೋಪಸಮಾವಿಷ್ಟೋ ರಕ್ತಬೀಜೋ ಮಹಾಸುರಃ ॥೪೯॥

ತಸ್ಯಾಹತಸ್ಯ ಬಹುಧಾ ಶಕ್ತಿಶೂಲಾದಿಭಿರ್ಭುವಿ ।
ಪಪಾತ ಯೋ ವೈ ರಕ್ತೌಘಸ್ತೇನಾಸಞ್ಛತಶೋಽಸುರಾಃ ॥೫೦॥

ತೈಶ್ಚಾಸುರಾಸೃಕ್ಸಮ್ಭೂತೈರಸುರೈಃ ಸಕಲಂ ಜಗತ್ ।
ವ್ಯಾಪ್ತಮಾಸೀತ್ತತೋ ದೇವಾ ಭಯಮಾಜಗ್ಮುರುತ್ತಮಮ್ ॥೫೧॥

ತಾನ್ ವಿಷಣ್ಣಾನ್ ಸುರಾನ್ದೃಷ್ಟ್ವಾ ಚಣ್ಡಿಕಾ ಪ್ರಾಹ ಸತ್ವರಾ ।
ಉವಾಚ ಕಾಲೀಂ ಚಾಮುಣ್ಡೇ ವಿಸ್ತೀರ್ಣಂ ವದನಂ ಕುರು ॥೫೨॥

ಮಚ್ಛಸ್ತ್ರಪಾತಸಮ್ಭೂತಾನ್ರಕ್ತಬಿನ್ದೂನ್ಮಹಾಸುರಾನ್ ।
ರಕ್ತಬೀಜಾತ್ಪ್ರತೀಚ್ಛ ತ್ವಂ ವಕ್ತ್ರೇಣಾನೇನ ವೇಗಿನಾ ॥೫೩॥

---

೪೯. ಹಾಗೆ ಎಲ್ಲ ಶಕ್ತಿದೇವತೆಗಳಿಂದ ಎದುರಿಸಲ್ಪಟ್ಟವನೂ, ಕೋಪದಿಂದ ಜ್ವಲಿಸುವವನೂ ಆದ ಆ ರಕ್ತಬೀಜಮಹಾಸುರನು ಎಲ್ಲ ಮಾತೃ-ದೇವತೆಗಳನ್ನು ಪ್ರತ್ಯೇಕ-ಪ್ರತ್ಯೇಕವಾಗಿ ಗದೆಯಿಂದ ಪ್ರಹರಿಸಿದನು.

೫೦. ಶಕ್ತಿ-ಶೂಲ ಮುಂತಾದ ಶಸ್ತ್ರಾಸ್ತ್ರಗಳಿಂದ ಬಹುವಿಧವಾಗಿ ಹೊಡೆಯಲ್ಪಟ್ಟಿರುವ ರಕ್ತಬೀಜಾಸುರನಿಂದ ಯಾವ ರಕ್ತಪ್ರವಾಹವು ನೆಲದಲ್ಲಿ ಹರಿಯಿತೋ ಅದರಿಂದ ಅನೇಕ ಮಂದಿ ಬಲಿಷ್ಠ ಅಸುರರು ಜನ್ಮವೆತ್ತಿದರು.

೫೧. ಹಾಗೆ ರಕ್ತಬೀಜಾಸುರನ ರಕ್ತದಿಂದ ಉದ್ಭವಿಸಿದ ಸಂಖ್ಯಾ-ತೀತರಾದ ರಾಕ್ಷಸರಿಂದ ಜಗತ್ತೆಲ್ಲವೂ ತುಂಬಿಹೋಯಿತು. ಆ ಪ್ರಸಂಗದಿಂದ ದೇವತೆಗಳು ವರ್ಣಿಸಲಾಗದ ಅಧಿಕ ಭಯದಿಂದ ಗ್ರಸ್ತರಾದರು.

೫೨. ಆಗ ಚಂಡಿಕಾಂಬಿಕೆಯು ದೇವತೆಗಳು ವಿಷಾದಾಕ್ರಾಂತ-ರಾದುದನ್ನು ಕಂಡು ತ್ವರೆಪಡುತ್ತ ಕಾಳಿಕಾದೇವಿಗೆ ಹೀಗೆಂದಳು—ಚಾಮುಂಡೆಯೆ! ನೀನು ನಿನ್ನ ಮುಖವನ್ನು ತೆರೆ.

೫೩. ನನ್ನ ಶಸ್ತ್ರಗಳ ಪ್ರಹಾರಗಳು ಬಿದ್ದು ರಕ್ತಬೀಜಾಸುರನ ಶರೀರದಿಂದ ಹೊರಚಿಮ್ಮುತ್ತಿರುವ ರಕ್ತದ ಹನಿಗಳನ್ನೂ ಮತ್ತು ಅದರಿಂದ ಹುಟ್ಟುವ ರಾಕ್ಷಸರನ್ನೂ ಜಾಗ್ರತೆಯಾಗಿ ವಿಸ್ತಾರಗೊಳಿಸಿರುವ ನಿನ್ನ ಮುಖದಿಂದ ನುಂಗಿಬಿಡು.

ಭಕ್ಷಯನ್ತೀ ಚರ ರಣೇ ತದುತ್ಪನ್ನಾನ್ಮಹಾಸುರಾನ್ ||೫೪||

ಏವಮೇಷ ಕ್ಷಯಂ ದೈತ್ಯಃ ಕ್ಷೀಣರಕ್ತೋ ಗಮಿಷ್ಯತಿ ।
ಭಕ್ಷ್ಯಮಾಣಾಸ್ತ್ವಯಾ ಚೋಗ್ರಾ ನ ಚೋತ್ಪತ್ಸ್ಯನ್ತಿ ಚಾಪರೇ ||೫೫||

ಋಷಿರುವಾಚ :—

ಇತ್ಯುಕ್ತ್ವಾ ತಾಂ ತತೋ ದೇವೀ ಶೂಲೇನಾಭಿಜಘಾನ ತಮ್ ।
ಮುಖೇನ ಕಾಲೀ ಜಗೃಹೇ ರಕ್ತಬೀಜಸ್ಯ ಶೋಣಿತಮ್ ||೫೬||

ತತೋಽಸಾವಾಜಘಾನಾಥ ಗದಯಾ ತತ್ರ ಚಣ್ಡಿಕಾಮ್ ।
ನ ಚಾಸ್ಯಾ ವೇದನಾಂ ಚಕ್ರೇ ಗದಾಪಾತೋಽಲ್ಪಿಕಾಮಪಿ ||೫೭||

---

೫೪. ಮತ್ತು ರಕ್ತಬೀಜಾಸುರನ ರಕ್ತಪ್ರವಾಹದಿಂದ ಹುಟ್ಟಿಬಂದ, ಅವನಲ್ಲಿದ್ದಷ್ಟು ಬಲ ಪರಾಕ್ರಮಗಳಿಂದ ಕೂಡಿದ ಮಹಾಸುರರನ್ನು ತಿನ್ನುತ್ತ ಭೈರವರೂಪದಿಂದ ರಣರಂಗದಲ್ಲಿ ಸಂಚರಿಸು.

೫೫. ಹೀಗೆ ಮಾಡುವುದರಿಂದ ರಕ್ತವೆಲ್ಲವೂ ಕ್ಷಯಿಸಿ ಈ ಅಸುರನು ಕ್ಷಯಹೊಂದುವನು. ಮತ್ತು ಇದುವರೆಗೆ ಹುಟ್ಟಿದ ಅಸುರರನ್ನು ನೀನು ತಿಂದು ನಾಶಮಾಡು. ಮುಂದೆ ಇಂತಹ ರಾಕ್ಷಸರು ಹುಟ್ಟುವಂತಿಲ್ಲ.

ಋಷಿಯು ಹೇಳಿದನು :—

೫೬. ಚಂಡಿಕಾಂಬಿಕೆಯು ಕಾಲಿದೇವಿಗೆ ಹೀಗೆಂದು ಹೇಳಿ ತರುವಾಯ ಶೂಲದಿಂದ ಆ ಅಸುರನನ್ನು ಹೊಡೆದಳು. ಆಗ ಸುರಿದುಬಂದ ರಕ್ತಬೀಜಾಸುರನ ರಕ್ತಕ್ಕೆ ಕಾಳಿಯು ಬಾಯಿಕೊಟ್ಟು ಪಾನಮಾಡಿದಳು.

೫೭. ಆಮೇಲೆ ರಕ್ತಬೀಜಾಸುರನು ಯುದ್ಧಮಾಡುತ್ತ ಗದೆಯಿಂದ ಚಂಡಿಕಾದೇವಿಯನ್ನು ಹೊಡೆದನು. ಆದರೆ ಆ ಗದಾಪ್ರಹಾರವು ದೇವಿಗೆ ಸ್ವಲ್ಪವೂ ನೋವನ್ನು ಉಂಟುಮಾಡಲಿಲ್ಲ.

ತಸ್ಯಾಹತಸ್ಯ ದೇಹಾತ್ತು ಬಹು ಸುಸ್ರಾವ ಶೋಣಿತಮ್ ।
ಯತಸ್ತತಃ ಸ್ವವಕ್ತ್ರೇಣ ಚಾಮುಣ್ಡಾ ಸಂಪ್ರತೀಚ್ಛತಿ ॥೫೮॥

ಮುಖೇ ಸಮುದ್ಗತಾ ಯೇಽಸ್ಯಾ ರಕ್ತಪಾತಾನ್ಮಹಾಸುರಾಃ ।
ತಾಂಶ್ಚಖಾದಾಥ ಚಾಮುಣ್ಡಾ ಪಪೌ ತಸ್ಯ ಚ ಶೋಣಿತಮ್ ॥೫೯॥

ದೇವೀ ಶೂಲೇನ ಚಕ್ರೇಣ ಬಾಣೈರಸಿಭಿರಿಷ್ಟಿಭಿಃ ।
ಜಘಾನ ರಕ್ತಬೀಜಂ ತಂ ಚಾಮುಣ್ಡಾಪೀತಶೋಣಿತಮ್ ॥೬೦॥

ಸ ಪಪಾತ ಮಹೀಪೃಷ್ಠೇ ಶಸ್ತ್ರಸಂಹತಿತೋ ಹತಃ ।
ನೀರಕ್ತಶ್ಚ ಮಹೀಪಾಲ ರಕ್ತಬೀಜೋ ಮಹಾಸುರಃ ॥೬೧॥

---

೫೮. ಯುದ್ಧದಲ್ಲಿ ಎಲ್ಲ ಮಾತೃಗಣದಿಂದಲೂ ದೇವಿಯಿಂದಲೂ ಪ್ರಹರಿಸಲ್ಪಟ್ಟ ಆ ಅಸುರನ ದೇಹದಿಂದ ಬಹಳ ರಕ್ತವು ಸುರಿಯಿತು. ಆದರೆ ರಕ್ತವು ಕೆಳಕ್ಕೆ ಬೀಳಲು ಅವಕಾಶವಾಗದಂತೆ ಚಾಮುಂಡೆಯು ತನ್ನ ಬಾಯಿಯಿಂದ ಅದನ್ನು ಹೀರಿಕೊಂಡಳು.

೫೯. ಈ ಅಸುರನ ರಕ್ತಸ್ರಾವದಿಂದ ಎಷ್ಟು ಮಂದಿ ಮಹಾ ಅಸುರರು ಕಾಳೀದೇವಿಯ ಮುಖದಲ್ಲಿ ಹುಟ್ಟಿದರೊ ಅವರೆಲ್ಲರನ್ನೂ ಕಾಲೀದೇವಿಯು ತಿಂದುಹಾಕಿದಳು. ಮತ್ತು ಅಸುರನ ರಕ್ತವನ್ನು ಹೀರಿ ಕುಡಿದಳು.

೬೦. ಆ ಸಮಯದಲ್ಲಿ ಚಾಮುಂಡಾಂಬಿಕೆಯು ಹೀರಿ ಕುಡಿದು ರಕ್ತಶೂನ್ಯನಾದ ರಕ್ತಬೀಜ ಅಸುರನನ್ನು ದೇವಿಯು ಶೂಲ-ಚಕ್ರ-ಬಾಣ-ಕತ್ತಿ-ಖುಷ್ಟಿ ಮುಂತಾದ ಬಗೆಬಗೆಯ ಆಯುಧಗಳಿಂದ ಹೊಡೆದಳು.

೬೧. ಎಲೈ ಸುರಥಮಹಾರಾಜನೆ! ಹೀಗೆ ಮೇಲೆ ಮೇಲೆ ಅನೇಕ ಶಸ್ತ್ರಸಮೂಹದಿಂದ ಹೊಡೆಯಲ್ಪಟ್ಟ ರಕ್ತಬೀಜ ಮಹಾಸುರನು ರಕ್ತವೇ ಇಲ್ಲದಂತಾಗಿ ಸತ್ತು ನೆಲದಮೇಲೆ ಬಿದ್ದನು.

**ತತಸ್ತೇ ಹರ್ಷಮತುಲಮವಾಪುಸ್ತ್ರಿದಶಾ ನೃಪ ।**
**ತೇಷಾಂ ಮಾತೃಗಣೋ ಮತ್ತೋ ನನರ್ತಾಸೃಙ್ಮದೋದ್ಧತಃ ॥೬೨॥**

**ಇತಿ ಶ್ರೀ ಮಾರ್ಕಣ್ಡೇಯ ಮಹಾಪುರಾಣೇ ದೇವೀಮಾಹಾತ್ಮ್ಯೇ**
**ರಕ್ತಬೀಜವಧೋ ನಾಮ ಪಞ್ಚಾಶೀತಿತಮೋಽಧ್ಯಾಯಃ**

---

೬೨. ಸುರಥಮಹಾರಾಜನೇ! ತರುವಾಯ ದೇವತೆಗಳು ಭಯಂಕರನಾದ ರಾಕ್ಷಸನ ವಧೆಯಿಂದ ಅತಿಶಯವಾದ ಸಂತೋಷವನ್ನು ಹೊಂದಿದರು. ಮತ್ತು ಆಯಾಯ ದೇವತಾಂಶಗಳಿಂದ ಜನಿಸಿದ ಮಾತೃದೇವತೆಗಳ ಗಣವು ಆ ರಾಕ್ಷಸರ ರಕ್ತವನ್ನು ಪಾನಮಾಡಿ ಮದವೇರಿ ಕುಣಿದಾಡಿತು.

**ಮಾರ್ಕಂಡೇಯ ಮಹಾಪುರಾಣದಲ್ಲಿ ಎಂಭತ್ತೈದನೆಯ ಅಧ್ಯಾಯವು**
**ಮುಗಿದುದು.**



|| ಓಂ ಶ್ರೀ ದುರ್ಗಾಯೈ ನಮಃ ||

# ಮಾರ್ಕಂಡೇಯ ಪುರಾಣಂ



## ಷಡಶೀತಿತಮೋಽಧ್ಯಾಯಃ

(ನಿಶುಮ್ಭಾಸುರವಧಃ)

ರಾಜೋವಾಚ :—

ವಿಚಿತ್ರಮಿದಮಾಖ್ಯಾತಂ ಭಗವನ್ ಭವತಾ ಮಮ ।
ದೇವ್ಯಾಶ್ಚರಿತಮಾಹಾತ್ಮ್ಯಂ ರಕ್ತಬೀಜವಧಾಶ್ರಿತಮ್ ||೧||

ಭೂಯಶ್ಚೇಚ್ಛಾಮ್ಯಹಂ ಶ್ರೋತುಂ ರಕ್ತಬೀಜೇ ನಿಪಾತಿತೇ ।
ಚಕಾರ ಶುಮ್ಭೋ ಯತ್ಕರ್ಮ ನಿಶುಮ್ಭಶ್ಚಾತಿಕೋಪನಃ ||೨||

---

## ೮೬ನೇ ಎಂಭತ್ತಾರನೆಯ ಅಧ್ಯಾಯ

ಸುರಥರಾಜನು ಇಂತೆಂದನು :—

೧. ಮಹಾಮಹಿಮನಾದ ಸುಮೇಧಮುನಿಯೇ ! ರಕ್ತಬೀಜಾಸುರನ ಸಂಹಾರವನ್ನು ಪ್ರಕಾಶಿಸುವ, ವಿಚಿತ್ರವಾದ ದೇವಿಯ ಚರಿತ್ರದ ಮಹಿಮೆಯು ನಿನ್ನಿಂದ ನನಗೆ ವರ್ಣಿಸಲ್ಪಟ್ಟಿದೆ.

೨. ಹೀಗೆ ರಕ್ತಬೀಜಾಸುರನ ವಧೆಯಾದ ಮೇಲೆ ಅತಿಯಾದ ಕೋಪದ ಸ್ವಭಾವವುಳ್ಳ ಶುಂಭಾಸುರನೂ ಹಾಗು ನಿಶುಂಭಾಸುರನೂ ಮುಂದೇನು ಸಾಹಸವನ್ನು ಮಾಡಿದರೆಂಬುದನ್ನು ಮತ್ತೆ ನಾನು ಕೇಳಲು ಇಷ್ಟವುಳ್ಳವನಾಗಿದ್ದೇನೆ.

**ಋಷಿರುವಾಚ :—**

**ಚಕಾರ ಕೋಪಮತುಲಂ ರಕ್ತಬೀಜೇ ನಿಪಾತಿತೇ ।**
**ಶುಮ್ಭಾಸುರೋ ನಿಶುಮ್ಭಶ್ಚ ಹತೇಷ್ವನ್ಯೇಷು ಚಾಹವೇ ॥೩॥**

**ಹನ್ಯಮಾನಂ ಮಹಾಸೈನ್ಯಂ ವಿಲೋಕ್ಯಾಮರ್ಷಮುದ್ವಹನ್ ।**
**ಅಭ್ಯಧಾವನ್ನಿಶುಮ್ಭೋಽಥ ಮುಖ್ಯಯಾಸುರಸೇನಯಾ ॥೪॥**

**ತಸ್ಯಾಗ್ರತಸ್ತದಾ ಪೃಷ್ಠೇ ಪಾರ್ಶ್ವಯೋಶ್ಚ ಮಹಾಸುರಾಃ ।**
**ಸನ್ದಷ್ಟೌಷ್ಠಪುಟಾಃ ಕ್ರುದ್ಧಾ ಹನ್ತುಂ ದೇವೀಮುಪಾಯಯುಃ ॥೫॥**

**ಆಜಗಾಮ ಮಹಾವೀರ್ಯಃ ಶುಮ್ಭೋಽಪಿ ಸ್ವಬಲೈರ್ವೃತಃ ।**
**ನಿಹನ್ತುಂ ಚಣ್ಡಿಕಾಂ ಕೋಪಾತ್ಕೃತ್ವಾ ಯುದ್ಧಂ ತು ಮಾತೃಭಿಃ॥೬॥**

---

ಸುಮೇಧ ಋಷಿಯು ಹೇಳಿದನು :—

೩. ರಕ್ತಬೀಜಾಸುರನು ಸತ್ತುಬಿದ್ದು ಹಾಗೆಯೇ ರಣರಂಗದಲ್ಲಿ ಇತರ ಅನೇಕ ರಾಕ್ಷಸರು ಹತರಾಗಿ ಹೋಗಲು ಶುಂಭ-ನಿಶುಂಭಾಸುರರಿಬ್ಬರು ಅತಿಯಾಗಿ ಕೋಪಾವೇಶತಾಳಿದರು.

೪. ಪ್ರತಿಕ್ಷಣದಲ್ಲಿ ತನ್ನ ಭಾರಿಯಾದ ಸೈನ್ಯವು ಸಂಹರಿಸಲ್ಪಡು-ತ್ತಿದ್ದುದನ್ನು ಕಂಡು ಕೋಪ-ಅಸಹನೆಗಳನ್ನು ಹೊಂದಿದ ನಿಶುಂಭಾಸುರನು ಪ್ರಧಾನವಾದ ರಾಕ್ಷಸಸೈನ್ಯದೊಡನೆ ದೇವಿಯ ಮೇಲೆ ಯುದ್ಧಕ್ಕೆ ಬಂದನು.

೫. ಆ ನಿಶುಂಭಾಸುರನ ಮುಂಭಾಗ, ಹಿಂಭಾಗ ಮತ್ತು ಎರಡು ಪಾರ್ಶ್ವಗಳಲ್ಲಿ ದೊಡ್ಡ ರಾಕ್ಷಸರು ಗುಂಪುಕೂಡಿದವರೂ ಕೋಪಾವೇಶವುಳ್ಳವರೂ ಮತ್ತು ಕಡಿಯುತ್ತಿದ್ದ ತುಟಿಗಳುಳ್ಳವರೂ ಆಗಿ ದೇವಿಯನ್ನು ಸಂಹಾರಮಾಡಲು ಬಂದರು.

೬. ಮಹತ್ತಾದ ವೀರ್ಯದಿಂದ ಕೂಡಿದ ಶುಂಭಾಸುರನೂ ತನ್ನ ಸೈನ್ಯಪರಿವಾರಸಮೇತನಾಗಿ ಮಾತೃದೇವತೆಗಳೊಡನೆ ಯುದ್ಧಮಾಡಿ ಚಂಡಿಕಾಂ-ಬಿಕೆಯನ್ನು ಸಂಹರಿಸುವೆನೆಂಬ ಸಂಕಲ್ಪದಿಂದ ಕೋಪಾವೇಶದಿಂದ ಬಂದನು.

ತತೋ ಯುದ್ಧಮತೀವಾಸೀದ್ದೇವ್ಯಾಃ ಶುಮ್ಭನಿಶುಮ್ಭಯೋಃ ।
ಶರವರ್ಷಮತೀವೋಗ್ರಂ ಮೇಘಯೋರಿವ ವರ್ಷತೋಃ ॥೭॥

ಚಿಚ್ಛೇದಾಸ್ತಾಞ್ಛರಾಂಸ್ತಾಭ್ಯಾಂ ಚಣ್ಡಿಕಾ ಸ್ವಶರೋತ್ಕರೈಃ ।
ತಾಡಯಾಮಾಸ ಚಾಙ್ಗೇಷು ಶಸ್ತ್ರೌಘೈರಸುರೇಶ್ವರೌ ॥೮॥

ನಿಶುಮ್ಭೋ ನಿಶಿತಂ ಖಡ್ಗಂ ಚರ್ಮ ಚಾದಾಯ ಸುಪ್ರಭಮ್ ।
ಅತಾಡಯನ್ಮೂರ್ಧ್ನಿ ಸಿಂಹಂ ದೇವ್ಯಾ ವಾಹನಮುತ್ತಮಮ್ ॥೯॥

ತಾಡಿತೇ ವಾಹನೇ ದೇವೀ ಕ್ಷುರಪ್ರೇಣಾಸಿಮುತ್ತಮಮ್ ।
ನಿಶುಮ್ಭಸ್ಯಾಶು ಚಿಚ್ಛೇದ ಚರ್ಮ ಚಾಪ್ಯಷ್ಟಚನ್ದ್ರಕಮ್ ॥೧೦॥

---

೭. ತರುವಾಯ ಮಳೆಯನ್ನು ಸುರಿಸುತ್ತಿರುವ ಎರಡು ಮೋಡಗಳಂತೆ ಉಗ್ರವಾಗಿ ಬಾಣಗಳ ಮಳೆಯನ್ನು ಸುರಿಸುತ್ತಿರುವ ಶುಂಭ-ನಿಶುಂಭ ಅಸುರರಿಗೂ ಚಂಡಿಕಾಂಬಿಕೆಗೂ ಅತಿ ಬಿರುಸಿನಿಂದ ಘೋರವಾದ ಯುದ್ಧವು ಜರುಗಿತು.

೮. ಈ ಸಂದರ್ಭದಲ್ಲಿ ಶುಂಭ-ನಿಶುಂಭರು ಪ್ರಯೋಗಿಸಿದ ಬಾಣಗಳನ್ನು ದೇವಿಯು ತನ್ನ ಬಾಣರಾಶಿಯಿಂದ ಕತ್ತರಿಸಿದಳು. ಮತ್ತು ರಾಕ್ಷಸರ ಪ್ರಭುಗಳಾದ ಶುಂಭ-ನಿಶುಂಭ ಅಸುರರ ದೇಹದ ಮೇಲೆ ಅನೇಕ ಬಾಣ-ಸಮೂಹಗಳಿಂದ ಪ್ರಹರಿಸಿದಳು.

೯. ನಿಶುಂಭಾಸುರನು ಹರಿತವೂ, ಉಜ್ವಲವಾದ ಪ್ರಭೆಯಿಂದ ಹೊಳೆಯುತ್ತಿರುವುದೂ ಆದ ಖಡ್ಗವನ್ನೂ ಫಲಕಾಯುಧವನ್ನೂ ತೆಗೆದುಕೊಂಡು ಬಂದು ದೇವಿಯ ಉತ್ತಮ ವಾಹನವಾದ ಸಿಂಹದ ತಲೆಯ ಮೇಲೆ ಹೊಡೆದನು.

೧೦. ಹೀಗೆ ನಿಶುಂಭನು ದೇವಿಯ ವಾಹನವನ್ನು ಹೊಡೆದಿರಲು ದೇವಿಯು ಕ್ಷುರಪ್ರವೆಂಬ ಒಂದು ಆಯುಧದಿಂದ ನಿಶುಂಭನು ಹಿಡಿದಿದ್ದ ಉತ್ತಮವಾದ ಖಡ್ಗಾಯುಧವನ್ನೂ ಮತ್ತು ಎಂಟು ಚಂದ್ರಾಕೃತಿಗಳಿಂದ ಕೂಡಿದ ಫಲಕಾಯುಧವನ್ನೂ ಕ್ಷಣಮಾತ್ರದಲ್ಲಿ ಕತ್ತರಿಸಿದಳು.

ಛಿನ್ನೇ ಚರ್ಮಣಿ ಖಡ್ಗೇ ಚ ಶಕ್ತಿಂ ಚಿಕ್ಷೇಪ ಸೋಽಸುರಃ ।
ತಾಮಪ್ಯಸ್ಯ ದ್ವಿಧಾ ಚಕ್ರೇ ಚಕ್ರೇಣಾಭಿಮುಖಾಗತಾಮ್ ॥೧೧॥

ಕೋಪಾಧ್ಮಾತೋ ನಿಶುಮ್ಭೋಽಥ ಶೂಲಂ ಜಗ್ರಾಹ ದಾನವಃ ।
ಆಯಾನ್ತಂ ಮುಷ್ಟಿಪಾತೇನ ದೇವೀ ತಚ್ಚಾಪ್ಯಚೂರ್ಣಯತ್ ॥೧೨॥

ಅಥಾದಾಯ ಗದಾಂ ಸೋಽಪಿ ಚಿಕ್ಷೇಪ ಚಣ್ಡಿಕಾಂ ಪ್ರತಿ ।
ಸಾಪಿ ದೇವ್ಯಾ ತ್ರಿಶೂಲೇನ ಭಿನ್ನಾ ಭಸ್ಮತ್ವಮಾಗತಾ ॥೧೩॥

ತತಃ ಪರಶುಹಸ್ತಂ ತಮಾಯಾನ್ತಂ ದೈತ್ಯಪುಙ್ಗವಮ್ ।
ಆಹತ್ಯ ದೇವೀ ಬಾಣೌಘೈರಪಾತಯತ ಭೂತಲೇ ॥೧೪॥

---

೧೧. ಆ ನಿಶುಂಭಾಸುರನು ತನ್ನ ಚರ್ಮ ಖಡ್ಗಗಳೆಂಬ ಎರಡು ಆಯುಧಗಳು ಕತ್ತರಿಸಲ್ಪಡಲಾಗಿ ಶಕ್ತಿ ಆಯುಧವನ್ನು ದೇವಿಯಮೇಲೆ ಪ್ರಯೋಗಿಸಿದನು. ಆಗ ದೇವಿಯು ತನ್ನ ಎದುರುಬರುತ್ತಿದ್ದ ಆ ಶಕ್ತಿ ಆಯುಧವನ್ನು ಚಕ್ರದಿಂದ ಎರಡು ತುಂಡನ್ನಾಗಿ ಮಾಡಿದಳು.

೧೨. ಶಕ್ತಿ ಆಯುಧವು ಕತ್ತರಿಸಿಹೋದ ಬಳಿಕ ಅತಿ ಕೋಪದಿಂದ ಮೈಮರೆತ ನಿಶುಂಭದಾನವನು ಶೂಲಾಯುಧವನ್ನು ತೆಗೆದುಕೊಂಡನು. ದೇವಿಯು ತನ್ನ ಅಭಿಮುಖವಾಗಿ ಬರುತ್ತಿದ್ದ ಶೂಲವನ್ನು ಮುಷ್ಟಿಪ್ರಹಾರದಿಂದ ಪುಡಿಮಾಡಿದಳು.

೧೩. ಅನಂತರದಲ್ಲಿ ಆ ಅಸುರನು ಗದೆಯನ್ನು ಎತ್ತಿ ಚಂಡಿಕಾದೇವಿಯ ಮೇಲೆ ಎಸೆದನು. ಆ ಗದೆಯು ದೇವಿಯ ತ್ರಿಶೂಲದಿಂದ ಭೇದಿಸಲ್ಪಟ್ಟು ಉರಿದು ಬೂದಿಯಾಗಿ ಬಿದ್ದಿತು.

೧೪. ತರುವಾಯ ಕೈಯಲ್ಲಿ ಕೊಡಲಿಯನ್ನು ಎತ್ತಿಕೊಂಡು ಸಮ್ಮುಖವಾಗಿ ಬರುತ್ತಿದ್ದ ದೈತ್ಯೋತ್ತಮನಾದ ನಿಶುಂಭನನ್ನು ದೇವಿಯು ಬಾಣರಾಶಿಯಿಂದ ಹೊಡೆದು ನೆಲಕ್ಕೆ ಉರುಳಿಸಿದಳು.

ತಸ್ಮಿನ್ನಿಪತಿತೇ ಭೂಮೌ ನಿಶುಮ್ಭೇ ಭೀಮವಿಕ್ರಮೇ ।
ಭ್ರಾತರ್ಯತೀವ ಸಂಕ್ರುದ್ಧಃ ಪ್ರಯಯೌ ಹನ್ತುಮಮ್ಬಿಕಾಮ್ ॥೧೫॥

ಸ ರಥಸ್ಥಸ್ತದಾತ್ಯುಚ್ಚೈರ್ಗೃಹೀತಪರಮಾಯುಧೈಃ ।
ಭುಜೈರಷ್ಟಾಭಿರತುಲೈರ್ವ್ಯಾಪ್ಯಾಶೇಷಂ ಬಭೌ ನಭಃ ॥೧೬॥

ಸಮಾಯಾನ್ತಂ ಸಮಾಲೋಕ್ಯ ದೇವೀ ಶಙ್ಖಮವಾದಯತ್ ।
ಜ್ಯಾಶಬ್ದಂ ಚಾಪಿ ಧನುಷಶ್ಚಕಾರಾತೀವ ದುಃಸಹಮ್ ॥೧೭॥

ಪೂರಯಾಮಾಸ ಕಕುಭೋ ನಿಜಘಣ್ಟಾಸ್ವನೇನ ಚ ।
ಸಮಸ್ತದೈತ್ಯಸೈನ್ಯಾನಾಂ ತೇಜೋವಧವಿಧಾಯಿನಾ ॥೧೮॥

---

೧೫. ಹೀಗೆ ಭಯಂಕರವಾದ ವಿಕ್ರಮವುಳ್ಳ ತಮ್ಮನಾದ ನಿಶುಂಭಾಸುರನು ದೇವಿಯಿಂದ ಹೊಡೆಯಲ್ಪಟ್ಟು ಮೂರ್ಛೆಹೊಂದಿ ಕೆಳಗೆ ಬೀಳಲಾಗಿ ಶುಂಭಾಸುರನು ಬಲು ಕೋಪಗೊಂಡವನಾಗಿ ಚಂಡಿಕಾದೇವಿಯನ್ನು ಕೊಲ್ಲಲು ಬಂದನು.

೧೬. ಆಗ ರಥವನ್ನೇರಿ ಕುಳಿತಿರುವ ಶುಂಭಾಸುರನು ಹಿಡಿದುಕೊಂಡಿರುವ ಉತ್ತಮವಾದ ಆಯುಧಗಳುಳ್ಳದ್ದೂ, ಅತಿ ದೀರ್ಘವೂ ಮತ್ತು ನಿರುಪಮವೂ ಆದ ಎಂಟು ಭುಜಗಳಿಂದ ಸಂಪೂರ್ಣ ಆಕಾಶವನ್ನು ಮುಚ್ಚಿದಂತೆ ಪ್ರಕಾಶಿಸಿದನು.

೧೭. ಆಗ ದೇವಿಯು ತನ್ನ ಸಮ್ಮುಖದಲ್ಲಿ ಬರುತ್ತಿದ್ದ ಶುಂಭಾಸುರನನ್ನು ನೋಡಿ ಗಟ್ಟಿಯಾಗಿ ಶಂಖವನ್ನು ಊದಿದಳು. ಮತ್ತು ಬಿಲ್ಲಿನ ಹುರಿಯನ್ನು ಎಳೆಮ ಕೇಳಲಾಗದಂತಹ ಟಂಕಾರಶಬ್ದವನ್ನು ಮಾಡಿದಳು.

೧೮. ಮತ್ತು ದೇವಿಯು ಎಲ್ಲ ದೈತ್ಯ-ದಾನವರ ತೇಜಸ್ಸನ್ನು ಭಂಗಗೊಳಿಸುವಂತಹ ತನ್ನ ಘಂಟಾಧ್ವನಿಯಿಂದ ದಿಕ್ಕು-ಮೂಲೆಗಳನ್ನು ತುಂಬಿಸಿದಳು. ಶಂಖ-ಬಿಲ್ಲಿನ ಟಂಕಾರ-ಘಂಟಾಧ್ವನಿಗಳು ರಾಕ್ಷಸರಿಗೆ ಭಯಂಕರವಾಗಿದ್ದುವು.

ತತಃ ಸಿಹ್ಮೋ ಮಹಾನಾದೈಸ್ತ್ಯಾಜಿತೇಭಮಹಾಮದೈಃ ।
ಪೂರಯಾಮಾಸ ಗಗನಂ ಗಾಂ ತಥೈವ ದಿಶೋ ದಶ ॥೧೯॥

ತತಃ ಕಾಲೀ ಸಮುತ್ಪತ್ಯ ಗಗನಂ ಕ್ಷ್ಮಾಮತಾಡಯತ್ ।
ಕರಾಭ್ಯಾಂ ತನ್ನಿನಾದೇನ ಪ್ರಾಕ್ಸ್ವನಾಸ್ತೇ ತಿರೋಹಿತಾಃ ॥೨೦॥

ಅಟ್ಟಾಟ್ಟಹಾಸಮತುಲಂ ಶಿವದೂತೀ ಚಕಾರ ಹ !
ತೈಃ ಶಬ್ದೈರಸುರಾಸ್ತ್ರೇಸುಃ ಶುಮ್ಭಃ ಕೋಪಂ ಪರಂ ಯಯೌ॥೨೧॥

ದುರಾತ್ಮಂಸ್ತಿಷ್ಠ ತಿಷ್ಠೇತಿ ವ್ಯಾಜಹಾರಾಮ್ಬಿಕಾ ಯದಾ ।
ತದಾ ಜಯೇತ್ಯಭಿಹಿತಂ ದೇವೈರಾಕಾಶಸಂಸ್ಥಿತೈಃ ॥೨೨॥

---

೧೯. ತರುವಾಯ ದೇವಿಯ ವಾಹನವಾದ ಸಿಂಹವು ಆನೆಗಳ ಮದವನ್ನು ಇಳಿಸುವಂತಹ ದೊಡ್ಡ ಗರ್ಜನೆಗಳಿಂದ ಆಕಾಶವನ್ನು ಮತ್ತು ಹತ್ತು ದಿಕ್ಕುಗಳನ್ನು ಶಬ್ದಮಯವನ್ನಾಗಿ ಮಾಡಿತು.

೨೦. ಅನಂತರವಲ್ಲಿ ಕಾಲೀದೇವಿಯು ಆಕಾಶಕ್ಕೆ ನೆಗೆದು ಕೈಗಳಿಂದ ನೆಲವನ್ನು ಅಪ್ಪಳಿಸಿದಳು. ಅದರಿಂದ ಉಂಟಾದ ಕಠೋರ ಧ್ವನಿಯಿಂದ ಮೊದಲಿನ ಧ್ವನಿಗಳೆಲ್ಲವೂ ಅಡಗಿಹೋದುವು.

೨೧. ಅಷ್ಟರಲ್ಲಿ ಚಂಡಿಕಾದೇವಿಯ ದೇಹದಿಂದ ಹುಟ್ಟಿದ ಶಿವದೂತಿಯು ಕರ್ಣಕಠೋರವಾದ ಅಟ್ಟಹಾಸವನ್ನು ಮಾಡಿದಳು. ಆ ಅಟ್ಟಹಾಸದ ಶಬ್ದಗಳಿಂದ ಅಸುರರು ಭಯಗೊಂಡರು. ಶುಂಭಾಸುರನು ಹೆಚ್ಚಾದ ಕೋಪವುಳ್ಳವನಾದನು.

೨೨. ಆ ಸಮಯದಲ್ಲಿ ದೇವಿಯು ಯಾವಾಗ ನೀಚರಾಕ್ಷಸನನ್ನು ನೋಡಿ "ಎಲೈ ದುರುಳನೇ! ನಿಲ್ಲು, ನಿಲ್ಲು" ಎಂದು ಗರ್ಜಿಸಿದಳೋ ಆಗ ಆಕಾಶದಲ್ಲಿ ನಿಂತಿದ್ದ ದೇವತೆಗಳು ದೇವಿಗೆ ಜಯವನ್ನು ಕೋರಿ ಜಯಘೋಷಣೆಯನ್ನು ಮಾಡಿದರು.

ಶುಮ್ಭೇನಾಗತ್ಯ ಯಾ ಶಕ್ತಿರ್ಮುಕ್ತಾ ಜ್ವಾಲಾತಿಭೀಷಣಾ ।
ಆಯಾನ್ತೀ ವಹ್ನಿಕೂಟಾಭಾ ಸಾ ನಿರಸ್ತಾ ಮಹೋಲ್ಕಯಾ ॥೨೩॥

ಸಿಂಹನಾದೇನ ಶುಮ್ಭಸ್ಯ ವ್ಯಾಪ್ತಂ ಲೋಕತ್ರಯಾನ್ತರಮ್ ।
ನಿರ್ಘಾತನಿಸ್ವನೋ ಘೋರೋ ಜಿತವಾನವನೀಪತೇ ॥೨೪॥

ಶುಮ್ಭಮುಕ್ತಾನ್ಶರಾನ್ದೇವೀ ಶುಮ್ಭಸ್ತತ್ಪ್ರಹಿತಾನ್ಶರಾನ್ ।
ಚಿಚ್ಛೇದ ಸ್ವಶರೈರುಗ್ರೈಃ ಶತಶೋಽಥ ಸಹಸ್ರಶಃ ॥೨೫॥

ತತಃ ಸಾ ಚಣ್ಡಿಕಾ ಕ್ರುದ್ಧಾ ಶೂಲೇನಾಭಿಜಘಾನ ತಮ್ ।
ಸ ತದಾಭಿಹತೋ ಭೂಮೌ ಮೂರ್ಛಿತೋ ನಿಪಪಾತ ಹ ॥೨೬॥

---

೨೩. ಶುಂಭಾಸುರನಿಂದ ಉರಿಯುತ್ತಿದ್ದ ಬೆಂಕಿಯ ಜ್ವಾಲೆಗಳಿಂದ ಭಯಂಕರವಾದ ಯಾವ ಶಕ್ತಿ ಆಯುಧವು ಪ್ರಯೋಗಿಸಲ್ಪಟ್ಟಿತೋ ಬೆಂಕಿಯರಾಶಿಯಂತೆ ಹೊಳೆಯುತ್ತ ತನ್ನ ಎದುರು ಬರುತ್ತಿದ್ದ ಆ ಶಕ್ತಿ ಆಯುಧವನ್ನು ದೇವಿಯು ತನ್ನ ದೊಡ್ಡ ಉಲ್ಕಾಯುಧದಿಂದ ನಿವಾರಿಸಿದಳು.

೨೪. ಎಲೈ ರಾಜನೆ! ಶುಂಭಾಸುರನ ಸಿಂಹನಾದದಿಂದ ಮೂರು ಲೋಕಗಳ ಮಧ್ಯಭಾಗವೆಲ್ಲವೂ ತುಂಬಿಹೋಯಿತು. ಆದರೆ ಅವನ ಸೈನಿಕರ "ಹೊಡಿ, ಬಡಿ" ಮುಂತಾದ ವೀರಾವೇಶದ ಕೂಗಿನಿಂದ ಸಿಂಹನಾದವು ಅಡಗಿಹೋಯಿತು.

೨೫. ಶುಂಭಾಸುರನು ಬಿಟ್ಟ ಬಾಣಗಳನ್ನು ದೇವಿಯು ಕತ್ತರಿಸಿದಳು. ಅಂತೆಯೇ ದೇವಿಯು ಪ್ರಯೋಗಿಸಿದ ಬಾಣಗಳನ್ನು ಶುಂಭಾಸುರನು ಕತ್ತರಿಸಿದನು. ಹೀಗೆ ಇಬ್ಬರು ತಮ್ಮ ತಮ್ಮ ಉಗ್ರ ಬಾಣಗಳಿಂದ ಶತ-ಸಹಸ್ರಸಂಖ್ಯೆಯ ಪ್ರತಿಬಾಣಗಳನ್ನು ಕತ್ತರಿಸಿದರು.

೨೬. ತರುವಾಯ ಚಂಡಿಕಾದೇವಿಯು ಬಹಳ ಕೋಪಗೊಂಡು ಶೂಲಾಯುಧದಿಂದ ಆ ರಾಕ್ಷಸನನ್ನು ಹೊಡೆದಳು. ಆಗ ಆ ರಾಕ್ಷಸನು ಶೂಲದಿಂದ ತಿವಿಯಲ್ಪಟ್ಟು ಮೂರ್ಛೆ ಹೊಂದಿ ನೆಲದ ಮೇಲೆ ಬಿದ್ದನು.

ತತೋ ನಿಶುಮ್ಭಃ ಸಮ್ಪ್ರಾಪ್ಯ ಚೇತನಾಮಾತ್ತಕಾರ್ಮುಕಃ ।
ಆಜಘಾನ ಶರೈರ್ದೇವೀಂ ಕಾಲೀಂ ಕೇಸರಿಣಂ ತಥಾ ॥೨೭॥

ಪುನಶ್ಚ ಕೃತ್ವಾ ಬಾಹೂನಾಮಯುತಂ ದನುಜೇಶ್ವರಃ ।
ಚಕ್ರಾಯುತೇನ ದಿತಿಜಶ್ಛಾದಯಾಮಾಸ ಚಣ್ಡಿಕಾಮ್ ॥೨೮॥

ತತೋ ಭಗವತೀ ಕ್ರುದ್ಧಾ ದುರ್ಗಾ ದುರ್ಗಾರ್ತಿನಾಶಿನೀ ।
ಚಿಚ್ಛೇದ ತಾನಿ ಚಕ್ರಾಣಿ ಸ್ವಶರೈಃ ಸಾಯಕಾಂಶ್ಚ ತಾನ್ ॥೨೯॥

ತತೋ ನಿಶುಮ್ಭೋ ವೇಗೇನ ಗದಾಮಾದಾಯ ಚಣ್ಡಿಕಾಮ್ ।
ಅಭ್ಯಧಾವತ ವೈ ಹನ್ತುಂ ದೈತ್ಯಸೇನಾಸಮಾವೃತಃ ॥೩೦॥

---

೨೭. ಇಷ್ಟರಲ್ಲಿ ನಿಶುಂಭಾಸುರನು ಪ್ರಜ್ಞೆಯನ್ನು ಹೊಂದಿ ಮತ್ತೆ ಬಿಲ್ಲು ಬಾಣಗಳನ್ನು ಹಿಡಿದುಕೊಂಡು ಬಂದು ಬಾಣಗಳಿಂದ ದೇವಿಯನ್ನೂ, ಕಾಳಿಯನ್ನೂ ಮತ್ತು ಸಿಂಹವನ್ನೂ ಹೊಡೆದನು.

೨೮. ದಾನವರಿಗೆ ಪ್ರಭುವೂ, ದಿತಿವಂಶದಲ್ಲಿ ಜನಿಸಿದವನೂ ಆದ ನಿಶುಂಭಾಸುರನು ಮತ್ತೆ ಮಾಯೆಯಿಂದ ಹತ್ತು ಸಹಸ್ರ ತೋಳುಗಳಿಂದ ಹತ್ತು ಸಹಸ್ರ ಚಕ್ರಾಯುಧಗಳನ್ನು ಹಿಡಿದು ಬಂದು ಆ ಆಯುಧಗಳನ್ನು ಪ್ರಯೋಗಿಸಿ ದೇವಿಯನ್ನು ಆವರಿಸಿದನು.

೨೯. ತರುವಾಯ ಅಖಂಡೈಶ್ವರ್ಯಸಂಪನ್ನಳೂ, ಅತಿಸಂಕಷ್ಟಗಳನ್ನು ಪರಿಹರಿಸುವವಳೂ ಆದ ಚಂಡಿಕಾದೇವಿಯು ಕೋಪಗೊಂಡವಳಾಗಿ ನಿಶುಂಭಾಸುರನ ಚಕ್ರಾಯುಧಗಳನ್ನೂ ಮತ್ತು ಬಾಣಗಳನ್ನೂ ಕತ್ತರಿಸಿದಳು.

೩೦. ತರುವಾಯ ನಿಶುಂಭಾಸುರನು ದೈತ್ಯಸೇನೆಯಿಂದ ಸುತ್ತಲ್ಪಟ್ಟವನಾಗಿ ಗದೆಯನ್ನು ತೆಗೆದುಕೊಂಡು ದೇವಿಯನ್ನು ಕೊಲ್ಲಬೇಕೆಂಬ ಸಂಕಲ್ಪದಿಂದ ವೇಗದಿಂದ ದೇವಿಯ ಬಳಿಗೆ ಓಡಿಬಂದನು.

ತಸ್ಯಾಪತತ ಏವಾಶು ಗದಾಂ ಚಿಚ್ಛೇದ ಚಣ್ಡಿಕಾ ।
ಖಡ್ಗೇನ ಶಿತಧಾರೇಣ ಸ ಚ ಶೂಲಂ ಸಮಾದದೇ ॥೩೧॥

ಶೂಲಹಸ್ತಂ ತಮಾಯಾನ್ತಂ ನಿಶುಮ್ಭಮಮರಾರ್ದನಮ್ ।
ಹೃದಿ ವಿವ್ಯಾಧ ಶೂಲೇನ ವೇಗಾವಿದ್ಧೇನ ಚಣ್ಡಿಕಾ ॥೩೨॥

ಭಿನ್ನಸ್ಯ ತಸ್ಯ ಶೂಲೇನ ಹೃದಯಾನ್ನಿಃಸೃತೋಽಪರಃ ।
ಮಹಾಬಲೋ ಮಹಾವೀರ್ಯಸ್ತಿಷ್ಠೇತಿ ಪುರುಷೋ ವದನ್ ॥೩೩॥

ತಸ್ಯ ನಿಷ್ಕ್ರಾಮತೋ ದೇವೀ ಪ್ರಹಸ್ಯ ಸ್ವನವತ್ತತಃ ।
ಶಿರಶ್ಚಿಚ್ಛೇದ ಖಡ್ಗೇನ ತತೋಽಸಾವಪತದ್ಭುವಿ ॥೩೪॥

---

೩೧. ಆಗ ಚಂಡಿಕಾದೇವಿಯು ತನ್ನ ಬಳಿಗೆ ನಿಶುಂಭಾಸುರನು ಬರು-ತ್ತಿದ್ದ ಹಾಗೆಯೆ ಹರಿತವಾದ ಮೊನೆಯುಳ್ಳ ಖಡ್ಗದಿಂದ ಅವನ ಗದೆಯನ್ನು ಕತ್ತರಿಸಿದಳು. ಆಗ ಅಸುರನು ಮತ್ತೆ ಶೂಲವನ್ನು ತೆಗೆದುಕೊಂಡನು.

೩೨. ಆಗ ಚಂಡಿಕಾದೇವಿಯು ಅಮರರನ್ನು ಪೀಡಿಸುವ ನಿಶುಂಭಾ-ಸುರನು ಶೂಲವನ್ನು ಹಿಡಿದು ತನ್ನ ಎದುರು ಬರುತ್ತಿರುವಷ್ಟರಲ್ಲಿ ತನ್ನ ಶೂಲ-ವನ್ನು ಎತ್ತಿ ವೇಗವಾಗಿ ಅಸುರನ ಹೃದಯಕ್ಕೆ ಪ್ರಹರಿಸಿದಳು.

೩೩. ಹೀಗೆ ದೇವಿಯ ಶೂಲದಿಂದ ಪ್ರಹರಿಸಲ್ಪಟ್ಟ ನಿಶುಂಭಾಸುರನ ಹೃದಯದಿಂದ ಮಹಾಬಲಿಷ್ಠನೂ, ಅತಿಯಾದ ವೀರ್ಯದಿಂದ ಕೂಡಿದವನೂ ಮತ್ತು " ನಿಲ್ಲು " ಎಂದು ಕೂಗಿಕೊಳ್ಳುವವನೂ ಆದ ಮತ್ತೊಬ್ಬ ಪುರುಷನು ಹೊರಟು ಬಂದನು.

೩೪. ತರುವಾಯ ಚಂಡಿಕಾದೇವಿಯು ಆ ಪುರುಷನು ಅಸುರನ ಎದೆ-ಯಿಂದ ಹೊರಗೆ ಹೊರಡುವಷ್ಟರಲ್ಲಿ ಶಬ್ದವಾಗುವ ಹಾಗೆ ನಗುತ್ತ ಖಡ್ಗಾ-ಯುಧದಿಂದ ಅವನ ತಲೆಯನ್ನು ಕತ್ತರಿಸಿದಳು. ಆ ಮೇಲೆ ಪುರುಷನು ನೆಲದ ಮೇಲೆ ಬಿದ್ದನು.

ತತಃ ಸಿಂಹಶ್ಚಖಾದೋಗ್ರದಂಷ್ಟ್ರಾಕ್ಷುಣ್ಣಶಿರೋಧರಾನ್ ।
ಅಸುರಾಂಸ್ತಾಂಸ್ತಥಾ ಕಾಲೀ ಶಿವದೂತೀ ತಥಾಪರಾನ್ ॥೩೫॥

ಕೌಮಾರೀಶಕ್ತಿನಿರ್ಭಿನ್ನಾಃ ಕೇಚಿನ್ನೇಶುರ್ಮಹಾಸುರಾಃ ।
ಬ್ರಹ್ಮಾಣೀಮನ್ತ್ರಪೂತೇನ ತೋಯೇನಾನ್ಯೇ ನಿರಾಕೃತಾಃ ॥೩೬॥

ಮಾಹೇಶ್ವರೀತ್ರಿಶೂಲೇನ ಭಿನ್ನಾಃ ಪೇತುಸ್ತಥಾಪರೇ ।
ವಾರಾಹೀತುಣ್ಡಘಾತೇನ ಕೇಚಿಚ್ಚೂರ್ಣೀಕೃತಾ ಭುವಿ ॥೩೭॥

ಖಣ್ಡಂ ಖಣ್ಡಂ ಚ ಚಕ್ರೇಣ ವೈಷ್ಣವ್ಯಾ ದಾನವಾಃ ಕೃತಾಃ ।
ವಜ್ರೇಣ ಚೈನ್ದ್ರೀ ಹಸ್ತಾಗ್ರವಿಮುಕ್ತೇನ ತಥಾ ಪರೇ ॥೩೮॥

---

೩೫. ಆ ಮೇಲೆ ದೇವಿಯ ವಾಹನವಾದ ಸಿಂಹವು ತನ್ನ ಕೋರೆ ಹಲ್ಲುಗಳಿಂದ ಪುಡಿಮಾಡಿದ ಕತ್ತು ಉಳ್ಳವರನ್ನಾಗಿ ಮಾಡುತ್ತ ಅನೇಕ ರಾಕ್ಷಸರನ್ನು ತಿಂದಿತು. ಕಾಳೀದೇವಿಯು ಕೆಲವರನ್ನು ತಿಂದಳು. ಮತ್ತು ಶಿವದೂತಿಯು ಮತ್ತೆ ಕೆಲವರನ್ನು ನುಂಗಿಹಾಕಿದಳು.

೩೬. ಹೀಗಿರಲು ಕೌಮಾರೀ ಶಕ್ತಿಯ ಶಕ್ತಿ ಆಯುಧದಿಂದ ಭೇದಿಸಲ್ಪಟ್ಟು ಕೆಲವರು ಅಸುರರು ನಾಶಹೊಂದಿದರು. ಬ್ರಹ್ಮಾಣಿಯ ಮಂತ್ರದಿಂದ ಪವಿತ್ರವಾದ ಕಮಂಡಲು ತೀರ್ಥದಿಂದ ಇನ್ನು ಕೆಲವರು ನಾಶವಾದರು.

೩೭. ಹಾಗು ಮಾಹೇಶ್ವರೀದೇವಿಯ ತ್ರಿಶೂಲದಿಂದ ಭೇದಿಸಲ್ಪಟ್ಟು ಹಲವಾರು ಮಂದಿ ರಾಕ್ಷಸರು ಹತರಾದರು. ವಾರಾಹೀ ದೇವಿಯ ಮೂತಿಯ ತಿವಿತದಿಂದ ಇನ್ನು ಕೆಲವರು ತುಂಡು ತುಂಡಾಗಿ ನೆಲಕ್ಕೆ ಬಿದ್ದರು.

೩೮. ಮತ್ತು ವೈಷ್ಣವೀಶಕ್ತಿಯಿಂದ ಕೆಲವರು ದಾನವರು ಚಕ್ರಾಯುಧದ ಏಟಿನಿಂದ ತುಂಡುತುಂಡಾಗಿ ಮಾಡಲ್ಪಟ್ಟರು. ಹಾಗು ಐಂದ್ರೀಶಕ್ತಿಯ ಹಸ್ತಾಗ್ರದಿಂದ ಪ್ರಯೋಗಿಸಲ್ಪಟ್ಟ ವಜ್ರಾಯುಧದಿಂದ ಮತ್ತೆ ಕೆಲವರು ವಧಿಸಲ್ಪಟ್ಟರು.

**ಕೇಚಿದ್ವಿನೇಶುರಸುರಾಃ ಕೇಚಿನ್ನಷ್ಟಾ ಮಹಾಹವಾತ್ ।**
**ಭಕ್ಷಿತಾಶ್ಚಾಪರೇ ಕಾಲೀಶಿವದೂತೀಮೃಗಾಧಿಪೈಃ ॥೩೯॥**

**ಇತಿ ಶ್ರೀ ಮಾರ್ಕಣ್ಡೇಯ ಮಹಾಪುರಾಣೇ ದೇವೀಮಾಹಾತ್ಮ್ಯೇ**
**ನಿಶುಮ್ಭಾಸುರವಧೋ ನಾಮ ಷಡಶೀತಿತಮೋಽಧ್ಯಾಯಃ**

---

೩೯. ಹೀಗಿರಲು ಕೆಲವರು ರಾಕ್ಷಸರು ಅಲ್ಲಲ್ಲಿ ಸತ್ತು ಬಿದ್ದರು. ಮತ್ತೆ ಕೆಲವರು ದೊಡ್ಡ ರಣರಂಗದಿಂದ ಓಡಿಹೋಗಿ ಅದೃಶ್ಯರಾದರು. ಇನ್ನು ಕೆಲವರು ಕಾಳೀ, ಶಿವದೂತಿ ಮತ್ತು ಮೃಗರಾಜನಾದ ಸಿಂಹ ಇವರಿಂದ ತಿನ್ನಲ್ಪಟ್ಟರು.

ಮಾರ್ಕಂಡೇಯ ಮಹಾಪುರಾಣದಲ್ಲಿ ಎಂಭತ್ತಾರನೆಯ ಅಧ್ಯಾಯವು
ಮುಗಿದುದು.



|| ಓಂ ಶ್ರೀ ದುರ್ಗಾಯೈ ನಮಃ ||

# ಮಾರ್ಕಂಡೇಯ ಪುರಾಣಂ

## ಸಪ್ತಾಶೀತಿತಮೋಽಧ್ಯಾಯಃ

### (ಶುಮ್ಭಾಸುರವಧಃ)

ಋಷಿರುವಾಚ :—

ನಿಶುಮ್ಭಂ ನಿಹತಂ ದೃಷ್ಟ್ವಾ ಭ್ರಾತರಂ ಪ್ರಾಣಸಮ್ಮಿತಮ್ ।
ಹನ್ಯಮಾನಂ ಬಲಂ ಚೈವ ಶುಮ್ಭಃ ಕ್ರುದ್ಧೋಽಬ್ರವೀದ್ವಚಃ ||೧||

ಬಲಾವಲೇಪಾದ್ದುಷ್ಟೇ ತ್ವಂ ಮಾ ದುರ್ಗೇ ಗರ್ವಮಾವಹ ।
ಅನ್ಯಾಸಾಂ ಬಲಮಾಶ್ರಿತ್ಯ ಯುದ್ಧ್ಯಸೇ ಯಾತಿಮಾನಿನೀ ||೨||

---

## ಎಂಭತ್ತೇಳನೆಯ ಅಧ್ಯಾಯ

ಸುಮೇಧಮುನಿಯು ಹೇಳಿದನು :—

೧. ತರುವಾಯ ದೈತ್ಯೇಶ್ವರನಾದ ಶುಂಭಾಸುರನು ತನ್ನ ಪ್ರಾಣಗಳಿಗೆ ಸಮಾನನಾದ ತಮ್ಮನಾದ ನಿಶುಂಭನು ಹತನಾದುದನ್ನೂ ಮತ್ತು ಅಸುರಸೈನ್ಯವು ವಧಿಸಲ್ಪಡುತ್ತಿದ್ದುದನ್ನೂ ನೋಡಿ ಬಲು ಕೋಪಗೊಂಡವನಾಗಿ ದೇವಿಯನ್ನು ಕುರಿತು ಹೀಗೆ ಹೇಳಿದನು.

೨. ಎಲೈ, ದುಷ್ಟಳೇ! ಸಮಸ್ತ ದಾನವರ ಮೃತ್ಯುವೇ! ಸೈನ್ಯ-ಸಹಾಯ ಸಂಪರ್ಕದಿಂದ ನೀನು ಅಹಂಕಾರವನ್ನು ತೋರಿಸಬೇಡ, ಅತ್ಯಹಂ-ಕಾರವನ್ನು ಪ್ರಕಾಶಪಡಿಸುತ್ತಿದ್ದ ನೀನು ಬ್ರಹ್ಮಾಣೀ ಮುಂತಾದ ಇತರರ ಬಲವನ್ನು ತೆಗೆದುಕೊಂಡು ಯುದ್ಧಮಾಡುತ್ತಿದ್ದೀಯೆ.

ಶ್ರೀ ದೇವ್ಯುವಾಚ :—

ಏಕೈವಾಹಂ ಜಗತ್ಯತ್ರ ದ್ವಿತೀಯಾ ಕಾ ಮಮಾಪರಾ ।
ಪಶ್ಯೈತಾ ದುಷ್ಟ ಮಯ್ಯೇವ ವಿಶನ್ತ್ಯೋ ಮದ್ವಿಭೂತಯಃ ||೩||

ಋಷಿರುವಾಚ :—

ತತಸ್ಸಮಸ್ತಾಸ್ತಾ ದೇವ್ಯೋ ಬ್ರಹ್ಮಾಣೀಪ್ರಮುಖಾ ಲಯಮ್ ।
ತಸ್ಯಾ ದೇವ್ಯಾಸ್ತನೌ ಜಗ್ಮುರೇಕೈವಾಸೀತ್ತದಾಮ್ಬಿಕಾ ||೪||

ಶ್ರೀದೇವ್ಯುವಾಚ :—

ಅಹಂ ವಿಭೂತ್ಯಾ ಬಹುಭಿರಿಹ ರೂಪೈರ್ಯದಾ ಸ್ಥಿತಾ ।
ತತ್ಸಂಹೃತಂ ಮಯೈಕೈವ ತಿಷ್ಠಾಮ್ಯಾಜೌ ಸ್ಥಿರೋ ಭವ ||೫||

---

ದೇವಿಯು ಇಂತೆಂದಳು :—

೩. ಎಲೈ, ದುಷ್ಟರಾಕ್ಷಸನೇ ! ಈ ಪ್ರಪಂಚದಲ್ಲಿ ನಾನು ಒಬ್ಬಳೇ ಇರುವೆನು. ನನಗೆ ದ್ವಿತೀಯಳಾಗಿ ಬೇರೊಬ್ಬಳು ಯಾರಿರುವಳು ? ಇಗೋ ! ಇತ್ತನೋಡು. ನನ್ನ ವಿಭೂತಿಯಿಂದ ವ್ಯಷ್ಟಿರೂಪರಾಗಿ ಬಂದಿರುವ ಶಕ್ತಿ-ಮೂರ್ತಿಗಳು ನನ್ನಲ್ಲಿಯೆ ಐಕ್ಯವನ್ನು ಹೊಂದುವರು.

ಸುಮೇಧ ಋಷಿಯು ಹೇಳಿದನು :—

೪. ಅನಂತರ ಬ್ರಹ್ಮಾಣೀ ಮುಂತಾದ ಆ ಎಲ್ಲ ಶಕ್ತಿದೇವತೆಗಳು ಜಗನ್ಮಾತೆಯಾದ ದೇವಿಯ ಮೂರ್ತಿಯಲ್ಲಿ ಸೇರಿಹೋದರು. ವ್ಯಷ್ಟಿಮೂರ್ತಿ-ಗಳು ಐಕ್ಯವನ್ನು ಹೊಂದಿದಾಗ ದೇವಿಯು ಅದ್ವಿತೀಯಳಾಗಿದ್ದಳು.

ದೇವಿಯು ಇಂತೆಂದಳು :—

೫. ನಾನು ನನ್ನ ವಿಭೂತಿವಿಸ್ತಾರದಿಂದ ಅನೇಕರೂಪಗಳನ್ನು ತೆಗೆದು-ಕೊಂಡಿದ್ದೆನು. ಈಗ ಆ ವಿಭೂತಿಯ ವ್ಯಷ್ಟಿರೂಪಗಳು ನನ್ನಲ್ಲಿ ಅಡಗಿಸಲ್ಪ-ಟ್ಟಿವೆ. ಈಗ ನಾನೊಬ್ಬಳೇ ಅದ್ವಿತೀಯಳಾಗಿರುವೆನು. ಈಗ ಯುದ್ಧಮಾಡಲು ಸ್ಥಿರನಾಗಿ ನಿಲ್ಲು.

ಋಷಿರುವಾಚ :—

ತತಃ ಪ್ರವವೃತೇ ಯುದ್ಧಂ ದೇವ್ಯಾಃ ಶುಮ್ಭಸ್ಯ ಚೋಭಯೋಃ ।
ಪಶ್ಯತಾಂ ಸರ್ವದೇವಾನಾಮಸುರಾಣಾಂ ಚ ದಾರುಣಮ್ ॥೬॥

ಶರವರ್ಷೈಃ ಶಿತೈಃ ಶಸ್ತ್ರೈಸ್ತಥಾ ಚಾಸ್ತ್ರೈಃ ಸುದಾರುಣೈಃ ।
ತಯೋರ್ಯುದ್ಧಮಭೂದ್ಭೂಯಃ ಸರ್ವಲೋಕಭಯಙ್ಕರಮ್ ॥೭॥

ದಿವ್ಯಾನ್ಯಸ್ತ್ರಾಣಿ ಶತಶೋ ಮುಮುಚೇ ಯಾನ್ಯಥಾಮ್ಬಿಕಾ ।
ಬಭಞ್ಜ ತಾನಿ ದೈತ್ಯೇನ್ದ್ರಸ್ತತ್ಪ್ರತೀಘಾತಕರ್ತೃಭಿಃ ॥೮॥

ಮುಕ್ತಾನಿ ತೇನ ಚಾಸ್ತ್ರಾಣಿ ದಿವ್ಯಾನಿ ಪರಮೇಶ್ವರೀ ।
ಬಭಞ್ಜ ಲೀಲಯೈವೋಗ್ರಹುಙ್ಕಾರೋಚ್ಚಾರಣಾದಿಭಿಃ ॥೯॥

---

ಋಷಿಯು ಹೇಳಿದನು :—

೬. ಹೀಗೆಂದು ದೇವಿಯು ಹೇಳಿದ ಕೂಡಲೆ ದೇವಿ ಮತ್ತು ಶುಂಭಾಸುರರು ಇಬ್ಬರಿಗೆ ದೇವತೆಗಳು ಮತ್ತು ರಾಕ್ಷಸರು ನೋಡುತ್ತ ನಿಂತಿರುವಹಾಗೆ ಭಯಂಕರವಾದ ಸಂಗ್ರಾಮವು ನಡೆಯಿತು.

೭. ಹರಿತವಾದ ಬಾಣಗಳ ವೃಷ್ಟಿಯಿಂದ, ಶಸ್ತ್ರ ಪ್ರಹಾರದಿಂದ ಮತ್ತು ಭಯಂಕರವಾದ ಮಂತ್ರಾಸ್ತ್ರ ಪ್ರಯೋಗಗಳಿಂದ ಸಮಸ್ತ ಲೋಕಗಳಿಗೆ ಭಯವನ್ನುಂಟುಮಾಡುವಂತೆ ದೇವೀ-ಶುಂಭಾಸುರರಿಗೆ ಘೋರಯುದ್ಧವು ಜರುಗಿತು.

೮. ಹೀಗಿರಲು ದೇವಿಯು ಯಾವ ನೂರಾರು ದಿವ್ಯಾಸ್ತ್ರಗಳನ್ನು ರಾಕ್ಷಸನ ಮೇಲೆ ಪ್ರಯೋಗಿಸಿದಳೋ ದೈತ್ಯೇಶ್ವರನಾದ ಶುಂಭಾಸುರನು ಅವುಗಳನ್ನು ಅಡಗಿಸಬಲ್ಲ ಪ್ರತ್ಯಸ್ತ್ರಗಳಿಂದ ಭಂಗಗೊಳಿಸಿದನು.

೯. ಹಾಗೆಯೇ ಶುಂಭಾಸುರನಿಂದ ದೇವಿಯ ಮೇಲೆ ಪ್ರಯೋಗಿಸಲ್ಪಟ್ಟ ದಿವ್ಯವಾದ ಅಸ್ತ್ರಗಳನ್ನು ಚಂಡಿಕಾದೇವಿಯು ಉಗ್ರವಾದ " ಹುಂ "ಕಾರದ ಉಚ್ಚಾರಣ ಮುಂತಾದ ಅನಾಯಾಸದ ಉಪಾಯಗಳಿಂದ ನಾಶಗೊಳಿಸಿದಳು.

ತತಃ ಶರಶತೈರ್ದೇವೀಮಾಚ್ಛಾದಯತ ಸೋಽಸುರಃ ।
ಸಾ ಚ ತತ್ಕುಪಿತಾ ದೇವೀ ಧನುಶ್ಚಿಚ್ಛೇದ ಚೇಷುಭಿಃ ॥೧೦॥

ಛಿನ್ನೇ ಧನುಷಿ ದೈತ್ಯೇನ್ದ್ರಸ್ತಥಾ ಶಕ್ತಿಮಥಾದದೇ ।
ಚಿಚ್ಛೇದ ದೇವೀ ಚಕ್ರೇಣ ತಾಮಪ್ಯಸ್ಯ ಕರೇ ಸ್ಥಿತಾಮ್ ॥೧೧॥

ತತಃ ಖಡ್ಗಮುಪಾದಾಯ ಶತಚನ್ದ್ರಂ ಚ ಭಾನುಮತ್ ।
ಅಭ್ಯಧಾವತ ತಾಂ ದೇವೀಂ ದೈತ್ಯಾನಾಮಧಿಪೇಶ್ವರಃ ॥೧೨॥

ತಸ್ಯಾಪತತ ಏವಾಶು ಖಡ್ಗಂ ಚಿಚ್ಛೇದ ಚಣ್ಡಿಕಾ ।
ಧನುರ್ಮುಕ್ತೈಃ ಶಿತೈರ್ಬಾಣೈಶ್ಚರ್ಮ ಚಾರ್ಕಕರಾಮಲಮ್ ॥೧೩॥

---

೧೦. ತರುವಾಯ ಆ ಶುಂಭಾಸುರನು ನೂರಾರು ಬಾಣಗಳನ್ನು ಸುರಿಸಿ ದೇವಿಯನ್ನು ಮುಚ್ಚಿಹಾಕಿದನು. ಆಗ ಕೋಪತಾಳಿದ ದೇವಿಯು ತನ್ನ ಬಾಣಗಳಿಂದ ಅಸುರನು ಹಿಡಿದಿರುವ ಬಿಲ್ಲನ್ನು ಕತ್ತರಿಸಿದಳು.

೧೧. ಹೀಗೆ ತನ್ನ ಕೈಯ್ಯಲ್ಲಿ ಹಿಡಿದ ಬಿಲ್ಲು ಕತ್ತರಿಸಲ್ಪಡಲು ಆ ದೈತ್ಯರಾಜನು ಅದನ್ನು ಬಿಟ್ಟು ಶಕ್ತಿ ಆಯುಧವನ್ನು ತೆಗೆದುಕೊಂಡನು. ಆಗ ದೇವಿಯು ಚಕ್ರಾಯುಧದಿಂದ ಅಸುರನ ಕೈಯಲ್ಲಿದ್ದ ಶಕ್ತಿ ಆಯುಧವನ್ನು ಕತ್ತರಿಸಿದಳು.

೧೨. ಶಕ್ತಿ ಆಯುಧವು ಕತ್ತರಿಸಿಹೋದ ಬಳಿಕ ದೈತ್ಯರ ಅಧಿಪರಾದ ಅನೇಕ ರಾಕ್ಷಸರಿಗೆ ಈಶ್ವರನಾದ ಶುಂಭಾಸುರನು ಚಂದ್ರಹಾಸಖಡ್ಗವನ್ನೂ ಮತ್ತು ನೂರಾರು ಚಂದ್ರರೇಖಾಂಕಿತವಾಗಿ ಹೊಳೆಯುತ್ತಿರುವ ಫಲಕಾಯುಧವನ್ನೂ ತೆಗೆದುಕೊಂಡು ಬಂದು ಎದುರಿಸಿದನು.

೧೩. ಹೀಗೆ ಆವೇಶದಿಂದ ಖಡ್ಗ-ಚರ್ಮಗಳನ್ನು ಧರಿಸಿದ ಅಸುರನು ಬರುತ್ತಿರುವಷ್ಟರಲ್ಲಿ ಚಂಡಿಕಾದೇವಿಯು ಬೇಗ ತನ್ನ ಬಿಲ್ಲಿನಲ್ಲಿಟ್ಟು ಪ್ರಯೋಗಿಸಿದ ಹರಿತವಾದ ಬಾಣಗಳಿಂದ ಅಸುರನ ಕತ್ತಿಯನ್ನೂ ಸೂರ್ಯಕಿರಣಗಳಂತಿದ್ದ ಫಲಕವನ್ನೂ ಕತ್ತರಿಸಿದಳು.

**ಅಶ್ವಾಂಶ್ಚ ಪಾತಯಾಮಾಸ ರಥಂ ಸಾರಥಿನಾ ಸಹ ||೧೪||**

**ಹತಾಶ್ವಃ ಸ ತದಾ ದೈತ್ಯಶ್ಛಿನ್ನಧನ್ವಾ ವಿಸಾರಥಿಃ |**
**ಜಗ್ರಾಹ ಮುದ್ಗರಂ ಘೋರಮಮ್ಬಿಕಾನಿಧನೋದ್ಯತಃ ||೧೫||**

**ಚಿಚ್ಛೇದಾಪತತಸ್ತಸ್ಯ ಮುದ್ಗರಂ ನಿಶಿತೈಃ ಶರೈಃ |**
**ತಥಾಪಿ ಸೋಽಭ್ಯಧಾವತ್ತಾಂ ಮುಷ್ಟಿಮುದ್ಯಮ್ಯ ವೇಗವಾನ್ ||೧೬||**

**ಸ ಮುಷ್ಟಿಂ ಪಾತಯಾಮಾಸ ಹೃದಯೇ ದೈತ್ಯಪುಙ್ಗವಃ |**
**ದೇವ್ಯಾಸ್ತಂ ಚಾಪಿ ಸಾ ದೇವೀ ತಲೇನೋರಸ್ಯತಾಡಯತ್ ||೧೭||**

---

೧೪. ಮತ್ತು ಶುಂಭಾಸುರನ ಮೇಲೆ ದೇವಿಯು ಬಾಣವೃಷ್ಟಿಯನ್ನು ಸುರಿಸಿ ಅವನೇರಿದ ರಥದ ಕುದುರೆಗಳನ್ನೂ ಸಾರಥಿಯನ್ನೂ ಧ್ವಂಸಮಾಡಿ ರಥವನ್ನು ಪುಡಿಮಾಡಿ ಕೆಡವಿದಳು.

೧೫. ಹೀಗೆ ಸತ್ತುಹೋದ ಅಶ್ವಗಳುಳ್ಳವನೂ, ಭಂಗಹೊಂದಿದ ಬಿಲ್ಲು ಉಳ್ಳವನೂ ಮತ್ತು ಸಾರಥಿಯಿಲ್ಲದವನೂ ಆದ ಆ ದೈತ್ಯನು ಆಗ ಚಂಡೀದೇವಿಯನ್ನು ವಧಿಸುವ ಯತ್ನವುಳ್ಳವನಾಗಿ ಘೋರವಾದ ಮುದ್ಗರ ಆಯುಧವನ್ನು ತೆಗೆದುಕೊಂಡು ಪ್ರಯೋಗಮಾಡಿದನು.

೧೬. ಆಗ ದೇವಿಯು ಹರಿತವಾದ ತನ್ನ ಬಾಣಗಳಿಂದ ತನ್ನನ್ನು ವಧಿಸಬೇಕೆಂದು ಬರುತ್ತಿದ್ದ ಅಸುರನ ಮುದ್ಗರಾಯುಧವನ್ನು ಕತ್ತರಿಸಿಹಾಕಿದಳು. ಆಗಲೂ ಧೀರನಾದ ಅಸುರನು ವೇಗದಿಂದ ಮುಷ್ಟಿಯನ್ನು ಎತ್ತಿಕೊಂಡು ದೇವಿಯನ್ನು ಹೊಡೆಯಲು ಓಡಿಬಂದನು.

೧೭. ದೈತ್ಯೋತ್ತಮನಾದ ಶುಂಭಾಸುರನು ದೇವಿಯ ಹೃದಯದಲ್ಲಿ ಮುಷ್ಟಿಯಿಂದ ಹೊಡೆದನು. ಆಗ ಆ ದೇವಿಯು ತನ್ನ ಹಸ್ತತಲದಿಂದ ದೈತ್ಯನನ್ನೂ ಎದೆಯಲ್ಲಿ ಬಲವಾಗಿ ಹೊಡೆದಳು.

ತಲಪ್ರಹಾರಾಭಿಹತೋ ನಿಪಪಾತ ಮಹೀತಲೇ ।
ಸ ದೈತ್ಯರಾಜಃ ಸಹಸಾ ಪುನರೇವ ತಥೋತ್ಥಿತಃ ॥೧೮॥

ಉತ್ಪತ್ಯ ಚ ಪ್ರಗೃಹ್ಯೋಚ್ಚೈರ್ದೇವೀಂ ಗಗನಮಾಸ್ಥಿತಃ ।
ತತ್ರಾಪಿ ಸಾ ನಿರಾಧಾರಾ ಯುಯುಧೇ ತೇನ ಚಣ್ಡಿಕಾ ॥೧೯॥

ನಿಯುದ್ಧಂ ಖೇ ತದಾ ದೈತ್ಯಶ್ಚಣ್ಡಿಕಾ ಚ ಪರಸ್ಪರಮ್ ।
ಚಕ್ರತುಃ ಪ್ರಥಮಂ ಸಿದ್ಧಮುನಿವಿಸ್ಮಯಕಾರಕಮ್ ॥೨೦॥

ತತೋ ನಿಯುದ್ಧಂ ಸುಚಿರಂ ಕೃತ್ವಾ ತೇನಾಮ್ಬಿಕಾ ಸಹ ।
ಉತ್ಪಾತ್ಯ ಭ್ರಾಮಯಾಮಾಸ ಚಿಕ್ಷೇಪ ಧರಣೀತಲೇ ॥೨೧॥

ಸ ಕ್ಷಿಪ್ತೋ ಧರಣೀಂ ಪ್ರಾಪ್ಯ ಮುಷ್ಟಿಮುದ್ಯಮ್ಯ ವೇಗಿತಃ ।
ಅಭ್ಯಧಾವತ ದುಷ್ಟಾತ್ಮಾ ಚಣ್ಡಿಕಾನಿಧನೇಚ್ಛಯಾ ॥೨೨॥

---

೧೮. ಆ ಸಮಯದಲ್ಲಿ ದೈತ್ಯೇಶ್ವರನಾದ ಶುಂಭಾಸುರನು ದೇವಿಯಿಂದ ಹಸ್ತತಲದಿಂದ ಹೊಡೆಯಲ್ಪಟ್ಟವನಾಗಿ ನೆಲಕ್ಕೆ ಉರುಳಿದನು. ಆದರೆ ಮತ್ತೆ ಅನಿರೀಕ್ಷಿತವಾದ ಬಲ-ವೇಗಗಳಿಂದ ಮತ್ತೆ ಎದ್ದು ಬಂದನು.

೧೯. ನೆಲದಿಂದ ಮೇಲಕ್ಕೆ ಎದ್ದ ಅಸುರನು ಕೂಡಲೆ ದೇವಿಯನ್ನು ಎತ್ತಿಕೊಂಡು ಆಕಾಶದಲ್ಲಿ ಎತ್ತರವಾಗಿ ನೆಗೆದನು. ದೇವಿಯು ಆಕಾಶದಲ್ಲಿ ಕೂಡ ಆಧಾರವಿಲ್ಲದೆ ನಿಂತವಳಾಗಿ ಅಸುರನೊಡನೆ ಯುದ್ಧ ಮಾಡಿದಳು.

೨೦. ಹೀಗೆ ಆಕಾಶಕ್ಕೆ ಹೋದ ಕೂಡಲೆ ಮೊದಲು ದೇವಿಯು ಮತ್ತು ಶುಂಭಾಸುರನು ಸಿದ್ಧಜನ-ಮಹರ್ಷಿಜನರಿಗೆ ಆಶ್ಚರ್ಯವನ್ನು ಉಂಟುಮಾಡು-ವಂತಹ ಬಾಹುಯುದ್ಧವನ್ನು ಮಾಡಿದರು.

೨೧. ತರುವಾಯ ಜಗನ್ಮಾತೆಯಾದ ದೇವಿಯು ಅಸುರನೊಡನೆ ಬಹಳ ಹೊತ್ತು ಬಾಹುಯುದ್ಧವನ್ನು ಮಾಡಿ ಆಮೇಲೆ ಆ ಅಸುರನನ್ನು ಹಿಡಿದೆತ್ತಿ ಗಿರಗಿರನೆ ಸುತ್ತಿಸಿ ನೆಲಕ್ಕೆ ಎಸೆದಳು.

೨೨. ನೀಚಸ್ವಭಾವದ ಶುಂಭಾಸುರನು ದೇವಿಯಿಂದ ನೆಲಕ್ಕೆ ಎಸೆಯಲ್ಪಟ್ಟು ನೆಲದ ಮೇಲೆ ಬಿದ್ದು ಮತ್ತೆ ವೇಗವುಳ್ಳವನಾಗಿ ಎದ್ದು ಮುಷ್ಟಿಯನ್ನೆತ್ತಿ ಚಂಡಿಕಾಂಬಿಕೆಯನ್ನು ವಧಿಸುವ ಸಂಕಲ್ಪದಿಂದ ಓಡಿಬಂದನು.

ತವಾಯಾನ್ತಂ ತತೋ ದೇವೀ ಸರ್ವದೈತ್ಯಜನೇಶ್ವರಮ್ ।
ಜಗತ್ಯಾಂ ಪಾತಯಾಮಾಸ ಭಿತ್ವಾ ಶೂಲೇನ ವಕ್ಷಸಿ ॥೨೩॥

ಸ ಗತಾಸುಃ ಪಪಾತೋರ್ವ್ಯಾಂ ದೇವೀಶೂಲಾಗ್ರವಿಕ್ಷತಃ ।
ಚಾಲಯನ್ಸಕಲಾಂ ಪೃಥ್ವೀಂ ಸಾಬ್ಧಿದ್ವೀಪಾಂ ಸಪರ್ವತಾಮ್ ॥೨೪॥

ತತಃ ಪ್ರಸನ್ನಮಖಿಲಂ ಹತೇ ತಸ್ಮಿನ್ದುರಾತ್ಮನಿ ।
ಜಗತ್ಸ್ವಾಸ್ಥ್ಯಮತೀವಾಪ ನಿರ್ಮಲಂ ಚಾಭವನ್ನಭಃ ॥೨೫॥

ಉತ್ಪಾತಮೇಘಾಃ ಸೋಲ್ಕಾ ಯೇ ಪ್ರಾಗಾಸಂಸ್ತೇ ಶಮಂ ಯಯುಃ।
ಸರಿತೋ ಮಾರ್ಗವಾಹಿನ್ಯಸ್ತಥಾ ಶುಸ್ತತ್ರ ನಿಪಾತಿತೇ ॥೨೬॥

---

೨೩. ತರುವಾಯ ದೇವಿಯು ತನ್ನನ್ನು ವಧಿಸಲು ವೇಗದಿಂದ ಬರುತ್ತಿರುವ ಸಮಸ್ತ ದೈತ್ಯಗಣಕ್ಕೆ ಅಧಿಪತಿಯಾದ ಶುಂಭಾಸುರನ ಎದೆಯನ್ನು ಶೂಲಪ್ರಹಾರದಿಂದ ಭೇದಿಸಿ ಅವನನ್ನು ನೆಲದಲ್ಲಿ ಕೆಡುಹಿದಳು.

೨೪. ಹೀಗೆ ದೇವಿಯ ಶೂಲದ ತುದಿಯಿಂದ ಚುಚ್ಚಲ್ಪಟ್ಟವನಾಗಿ ಹಾರಿಹೋದ ಪ್ರಾಣವಾಯುವುಳ್ಳ ಶುಂಭಾಸುರನು ಅನೇಕ ಸಮುದ್ರ-ದ್ವೀಪ-ಪರ್ವತ ಮುಂತಾದ ಭಾಗಗಳಿಂದ ಕೂಡಿದ ಸಮಸ್ತ ಭೂಮಿಯನ್ನು ನಡುಗಿಸುತ್ತ ನೆಲದ ಮೇಲೆ ಬಿದ್ದನು.

೨೫. ಲೋಕಕಂಟಕನಾದ ಆ ನೀಚಶುಂಭಾಸುರನು ಮರಣ ಹೊಂದಿರಲು ಎಲ್ಲ ಉಪದ್ರವವೂ ಶಾಂತವಾಯಿತು. ಜಗತ್ತೆಲ್ಲವೂ ಅತಿಶಯವಾದ ಸ್ವಸ್ಥತೆಯನ್ನು ಹೊಂದಿತು. ಮತ್ತು ಆಕಾಶವು ನಿರ್ಮಲವಾಗಿ ಹೊಳೆಯಿತು.

೨೬. ನೀಚಾತ್ಮನಾದ ಶುಂಭಾಸುರನು ಹತನಾಗಿ ಹೋಗಲು ಅವನ ನಾಶವನ್ನು ಸೂಚಿಸುವ ಶಕುನಗಳಾಗಿ ಮೊದಲು ಕೊಳ್ಳಿಮಳೆಗಳನ್ನು ಸುರಿಸುವ ಯಾವ ಉತ್ಪಾತ ಮೇಘಗಳಿದ್ದುವೋ ಅವು ಅಡಗಿಹೋದುವು. ಉಕ್ಕಿಬಂದಿದ್ದ ನದಿಗಳು ತಮ್ಮ ಪಾತ್ರಗಳಲ್ಲಿ ಹರಿಯಲಾರಂಭಿಸಿತು.

ತತೋ ದೇವಗಣಾಃ ಸರ್ವೇ ಹರ್ಷನಿರ್ಭರಮಾನಸಾಃ ।
ಬಭೂವುರ್ನಿಹತೇ ತಸ್ಮಿನ್ಗನ್ಧರ್ವಾ ಲಲಿತಂ ಜಗುಃ ॥೨೭॥

ಅವಾದಯಂಸ್ತಥೈವಾನ್ಯೇ ನನೃತುಶ್ಚಾಪ್ಸರೋಗಣಾಃ ।
ವವುಃ ಪುಣ್ಯಾಸ್ತಥಾ ವಾತಾಃ ಸುಪ್ರಭೋಽಭೂದ್ದಿವಾಕರಃ ॥೨೮॥

ಜಜ್ವಲುಶ್ಚಾಗ್ನಯಃ ಶಾನ್ತಾಃ ಶಾನ್ತದಿಗ್ಜನಿತಸ್ವನಾಃ ॥೨೯॥

ಇತಿ ಶ್ರೀ ಮಾರ್ಕಣ್ಡೇಯ ಮಹಾಪುರಾಣೇ ದೇವೀಮಾಹಾತ್ಮ್ಯೇ
ಶುಮ್ಭಾಸುರವಧೋ ನಾಮ ಸಪ್ತಾಶೀತಿತಮೋಽಧ್ಯಾಯಃ

---

೨೭. ತರುವಾಯ ಸಮಸ್ತ ದೇವತೆಗಳ ಗುಂಪುಗಳು ಹರ್ಷ ಉದ್ರೇಕದಿಂದ ಪೂರ್ಣವಾದ ಮಾನಸವುಳ್ಳವರಾದರು. ಅಂತೆಯೆ ಶುಂಭಾಸುರನ ಮೃತ್ಯುವಿನಿಂದ ಸಂತುಷ್ಟರಾದ ಗಂಧರ್ವರು ಮಧುರವಾಗಿ ಗಾನಮಾಡಿದರು.

೨೮. ಹಾಗು ಮತ್ತೆ ಕೆಲವರು ಗಂಧರ್ವರು ವಾದ್ಯಗಳನ್ನು ಧ್ವನಿಸಿದರು. ಅಪ್ಸರಾಂಗನೆಯರು ನರ್ತನಮಾಡಿದರು. ಗಾಳಿಯು ಸ್ಪರ್ಶನೀಯವಾಗಿಯೂ ಪಾವನವಾಗಿಯೂ ಬೀಸಿತು. ಮತ್ತು ಸೂರ್ಯಬಿಂಬವು ಪ್ರಸನ್ನವಾದ ಕಾಂತಿಯಿಂದ ಥಳಥಳಿಸಿತು.

೨೯. ಶುಂಭಾಸುರನ ಉಪದ್ರವದಿಂದ ನಿಂತುಹೋದ ಯಜ್ಞಾದಿಕರ್ಮಗಳು ಮತ್ತೆ ನಡೆಯುವಂತಾಗಿ ಪ್ರಸನ್ನವಾಗಿ ಅಗ್ನಿಗಳು ಜ್ವಲಿಸಿದುವು. ಮತ್ತು ಉತ್ಪಾತಸೂಚನೆಗಾಗಿ ದಿಗಂತಗಳಲ್ಲಿ ಕೇಳಿಸುತ್ತಿದ್ದ ಕ್ರೂರಶಬ್ದಗಳು ಅಡಗಿದುವು.

ಮಾರ್ಕಂಡೇಯ ಮಹಾಪುರಾಣದಲ್ಲಿ ಎಂಭತ್ತೇಳನೆಯ ಅಧ್ಯಾಯವು
ಮುಗಿದುದು.

|| ಓಂ ಶ್ರೀ ದುರ್ಗಾಯೈ ನಮಃ ||

# ಮಾರ್ಕಂಡೇಯ ಪುರಾಣಂ



## ಅಷ್ಟಾಶೀತಿತಮೋಽಧ್ಯಾಯಃ

### (ನಾರಾಯಣೀದೇವೀಸ್ತುತಿಃ)

**ಋಷಿರುವಾಚ :—**

**ದೇವ್ಯಾ ಹತೇ ತತ್ರ ಮಹಾಸುರೇನ್ದ್ರೇ**
**ಸೇನ್ದ್ರಾಃ ಸುರಾ ವಹ್ನಿಪುರೋಗಮಾಸ್ತಾಮ್ ।**
**ಕಾತ್ಯಾಯನೀಂ ತುಷ್ಟುವುರಿಷ್ಟಲಾಭಾ-**
**ದ್ವಿಕಾಶಿವಕ್ತ್ರಾಬ್ಜವಿಕಾಶಿತಾಶಾಃ ॥೧॥**

**ದೇವಾ ಊಚುಃ :—**

**ದೇವಿ ಪ್ರಪನ್ನಾರ್ತಿಹರೇ ಪ್ರಸೀದ**
**ಪ್ರಸೀದ ಮಾತರ್ಜಗತೋಽಖಿಲಸ್ಯ ।**

---

### ಎಂಭತ್ತೆಂಟನೆಯ ಅಧ್ಯಾಯ

ಸುಮೇಧ ಋಷಿಯು ಹೇಳಿದನು :—

೧. ದೇವಿಯಿಂದ ಮಹಾಅಸುರರಿಗೆ ರಾಜನಾದ ಶುಂಭಾಸುರನು ಹತನಾಗಲು ದೇವರಾಜನಾದ ಇಂದ್ರ–ಅಗ್ನಿ ಮುಂತಾದ ಸಮಸ್ತ ದೇವತೆಗಳು ತಮಗೆ ಇಷ್ಟವಾದ ಶತ್ರುಸಂಹಾರವು ಪೂರ್ಣವಾಗಿ ನೆರವೇರಿದುದರಿಂದ ಅರಳಿದ ಮುಖಕಮಲಗಳಿಂದ ಬೆಳಗಿದ ಸಮಸ್ತ ದಿಕ್ಕುಗಳುಳ್ಳವರಾಗಿ ಕಾತ್ಯಾಯನೀ ಎಂದು ಕರೆಯಲ್ಪಡುವ ಚಂಡಿಕಾದೇವಿಯನ್ನು ಸ್ತುತಿಮಾಡಿದರು.

ದೇವತೆಗಳು ಸ್ತುತಿಸಿದರು :—

೨. ದೇವಿಯೇ ! ಶರಣಾಗತ ಜನರ ಪೀಡೆಯನ್ನು ಪರಿಹರಿಸುವವಳೇ ! ನೀನು ಪ್ರಸನ್ನಳಾಗು. ಚರ-ಅಚರ ಸಹಿತವಾದ ಸಕಲ ಪ್ರಪಂಚಕ್ಕೆ ಜನನಿಯೇ !

ಪ್ರಸೀದ ವಿಶ್ವೇಶ್ವರಿ ಪಾಹಿ ವಿಶ್ವಂ
ತ್ವಮೀಶ್ವರೀ ದೇವಿ ಚರಾಚರಸ್ಯ ||೨||

ಆಧಾರಭೂತಾ ಜಗತಸ್ತ್ವಮೇಕಾ
ಮಹೀಸ್ವರೂಪೇಣ ಯತಃ ಸ್ಥಿತಾಸಿ ।
ಅಪಾಂ ಸ್ವರೂಪಸ್ಥಿತಯಾ ತ್ವಯೈತ-
ದಾಪ್ಯಾಯತೇ ಕೃತ್ಸ್ನಮಲಙ್ಘ್ಯವೀರ್ಯೇ ||೩||

ತ್ವಂ ವೈಷ್ಣವೀಶಕ್ತಿರನಂತವೀರ್ಯಾ
ವಿಶ್ವಸ್ಯ ಬೀಜಂ ಪರಮಾಸಿ ಮಾಯಾ ।
ಸಮ್ಮೋಹಿತಂ ದೇವಿ ಸಮಸ್ತಮೇತ-
ತ್ತ್ವಂ ವೈ ಪ್ರಸನ್ನಾ ಭುವಿ ಮುಕ್ತಿಹೇತುಃ ||೪||

ವಿದ್ಯಾಃ ಸಮಸ್ತಾಸ್ತವ ದೇವಿ ಭೇದಾಃ
ಸ್ತ್ರಿಯಃ ಸಮಸ್ತಾಃ ಸಕಲಂ ಜಗತ್ಸು ।

---

ನೀನು ಪ್ರಸನ್ನಳಾಗು. ವಿಶ್ವದ ನಿಯಾಮಕಳೇ ! ನೀನು ಪ್ರಸನ್ನಳಾಗು. ನೀನು ಚರಾಚರಪ್ರಪಂಚದ ಈಶ್ವರಿಯಾಗಿದ್ದೀಯೆ. ವಿಶ್ವವನ್ನು ರಕ್ಷಿಸು.

೩. ಪರರಿಂದ ಮೀರಲಾಗದ ವೀರ್ಯವುಳ್ಳವಳೇ ! ದೇವಿಯೇ ! ನೀನು ಭೂಮಿಯ ಸ್ವರೂಪದಿಂದ ಇರುವುದರಿಂದ ಸಮಸ್ತ ಜಗತ್ತಿಗೆ ಆಧಾರಳಾಗಿರುತ್ತೀಯೆ. ಮತ್ತು ಜಲತತ್ತ್ವದ ರೂಪದಿಂದ ಇರುವ ನಿನ್ನಿಂದ ಈ ಸಂಪೂರ್ಣ ವಿಶ್ವವು ನೀರಿನಿಂದಾಗುವ ಉಪಕಾರವನ್ನು ಮಾಡಿ ಪೋಷಣಗೊಳಿಸಲ್ಪಡುತ್ತದೆ.

೪. ಅಪಾರವಾದ ವೀರ್ಯದಿಂದ ಕೂಡಿರುವ, ವಿಶ್ವಕ್ಕೆ ಬೀಜವಾದ, ವಿಷ್ಣುವಿನ ಅಂಶರೂಪವಾದ ಮತ್ತು ಸರ್ವವ್ಯಾಪಕವಾದ ಮಾಯಾಶಕ್ತಿಯು ನೀನೇ ಆಗಿದ್ದೀಯೆ. ದೇವಿಯೆ ! ನಿನ್ನ ಮಾಯಾರೂಪದಿಂದ ಸಮಸ್ತ ವಿಶ್ವವು ಮೋಹಹೊಂದಿರುವುದು. ಭೂಮಂಡಲದಲ್ಲಿ ನೀನು ಅನುಗ್ರಹಬುದ್ಧಿಯುಳ್ಳವಳಾದರೆ ಮುಕ್ತಿಯನ್ನು ಕರುಣಿಸುತ್ತೀಯೆ.

೫. ಚಂಡಿಕಾದೇವಿಯೆ ! ಸಮಸ್ತ ವಿದ್ಯೆಗಳು ನಿನ್ನ ಬಗೆಬಗೆಯ ಅಂಶರೂಪಗಳಾಗಿವೆ. ಸಮಸ್ತ ಸ್ತ್ರೀಯರು ನಿನ್ನ ಅಂಶಸ್ವರೂಪರಾಗಿರುವರು. ಸಕಲ ಭುವನವು ನಿನ್ನೊಬ್ಬಳಿಂದ ಪರಿಪೂರ್ಣವಾಗಿರುವುದು. ಹೀಗೆ ಸಮಸ್ತ

ತ್ವಯೈಕಯಾ ಪೂರಿತಮಮ್ಬಯೈತ-
ತ್ಕಾ ತೇ ಸ್ತುತಿಃ ಸ್ತವ್ಯಪರಾಪರೋಕ್ತಿಃ ||೫||

ಸರ್ವಭೂತಾ ಯದಾ ದೇವೀ ಭುಕ್ತಿಮುಕ್ತಿಪ್ರದಾಯಿನೀ ।
ತ್ವಂ ಸ್ತುತಾ ಸ್ತುತಯೇ ಕಾ ವಾ ಭವನ್ತಿ ಪರಮೋಕ್ತಯಃ ||೬||

ಸರ್ವಸ್ಯ ಬುದ್ಧಿರೂಪೇಣ ಜನಸ್ಯ ಹೃದಿ ಸಂಸ್ಥಿತೇ ।
ಸ್ವರ್ಗಾಪವರ್ಗದೇ ದೇವಿ ನಾರಾಯಣಿ ನಮೋಽಸ್ತು ತೇ ||೭||

ಕಲಾಕಾಷ್ಠಾದಿರೂಪೇಣ ಪರಿಣಾಮಪ್ರದಾಯಿನಿ ।
ವಿಶ್ವಸ್ಯೋಪರತೌ ಶಕ್ತೇ ನಾರಾಯಣಿ ನಮೋಽಸ್ತು ತೇ ||೮||

---

ವಸ್ತುವು ನಿನ್ನ ಅಂಶವಾಗಿರಲು ಬೇರೊಂದು ಸ್ತುತಿಸಲು ಅರ್ಹವಾದ ವಸ್ತುವನ್ನು ಬೋರೊಬ್ಬನು ಸ್ತುತಿಮಾಡುವುದೆಂಬ ವಚನಕ್ಕೆ ಅದ್ವಿತೀಯಳಾದ ನಿನ್ನಲ್ಲಿ ಅವಕಾಶವೆಲ್ಲಿಯದು ?

೬. ದೇವಿಯೇ ! ಸರ್ವ ವಿಶ್ವಾತ್ಮಕಳು ಮತ್ತು ಸ್ವರ್ಗಾದಿ ಭೋಗಗಳನ್ನೂ ನಿತ್ಯಾನಂದ ರೂಪವಾದ ಮೋಕ್ಷವನ್ನು ಕೊಡುವವಳೆಂದು ಪರಮಾರ್ಥವಾಗಿ ನೀನು ಸ್ತುತಿಸಲ್ಪಟ್ಟಿದ್ದೀಯೆ. ಇವಕ್ಕಿಂತಲೂ ಮಿಗಿಲಾವ ಸ್ತೋತ್ರಮಾಡುವ ಮಾತುಗಳು ಏನಿವೆ ?

೭. ಸಮಸ್ತ ಜಂತುಗಳ ಹೃದಯದಲ್ಲಿ ಬುದ್ಧಿಯ ರೂಪದಿಂದ ಇರುವವಳು ನೀನು. ಅಂತಹ ಬುದ್ಧಿಯಲ್ಲಿ ಸ್ವರ್ಗ-ಮೋಕ್ಷಸಾಧನಗಳ ಪ್ರವೃತ್ತಿಯನ್ನು ಉಂಟುಮಾಡಿ ಸ್ವರ್ಗ-ಮೋಕ್ಷಗಳನ್ನು ಕರುಣಿಸುವವಳು ನೀನು. ಇಂತಹ ನಾರಾಯಣನ ವಲ್ಲಭೆಯಾದ ನಿನ್ನನ್ನು ನಮಸ್ಕರಿಸುವೆವು.

೮. ಮಹಾಕಾಲವನ್ನು ಸೂಕ್ಷ್ಮಾಂಶರೂಪವಾಗಿ ವಿಭಜಿಸುವಾಗ ಕಡೆಯದಾದ ಕಾಷ್ಠಾ ಮತ್ತು ಕಲಾ ಎಂಬ ಸೂಕ್ಷ್ಮಾಂಶಗಳು ಮೊದಲಾಗಿ ಸಮಸ್ತ ಕಾಲಾವಯವಗಳ ರೂಪದಿಂದ ಜಗತ್ತಿನ ಪರಿಣಾಮವನ್ನುಂಟುಮಾಡುವವಳು ನೀನು. ವಿಶ್ವವನ್ನು ಸಂಹಾರಗೊಳಿಸುವ ಶಕ್ತಿಯುಳ್ಳವಳು ನೀನು. ಇಂತಹ ನಾರಾಯಣಿಯನ್ನು ನಾವು ವಂದಿಸುವೆವು.

ಸರ್ವಮಂಗಳಮಾಂಗಲ್ಯೇ ಶಿವೇ ಸರ್ವಾರ್ಥಸಾಧಿಕೇ ।
ಶರಣ್ಯೇ ತ್ರ್ಯಂಬಕೇ ಗೌರಿ ನಾರಾಯಣಿ ನಮೋಽಸ್ತು ತೇ ॥೯॥

ಸೃಷ್ಟಿಸ್ಥಿತಿವಿನಾಶಾನಾಂ ಶಕ್ತಿಭೂತೇ ಸನಾತನಿ ।
ಗುಣಾಶ್ರಯೇ ಗುಣಮಯೇ ನಾರಾಯಣಿ ನಮೋಽಸ್ತು ತೇ ॥೧೦॥

ಶರಣಾಗತದೀನಾರ್ತಪರಿತ್ರಾಣಪರಾಯಣೇ ।
ಸರ್ವಸ್ಯಾರ್ತಿಹರೇ ದೇವಿ ನಾರಾಯಣಿ ನಮೋಽಸ್ತು ತೇ ॥೧೧॥

ಹಂಸಯುಕ್ತವಿಮಾನಸ್ಥೇ ಬ್ರಹ್ಮಾಣೀರೂಪಧಾರಿಣಿ ।
ಕೌಶಾಂಭಃಕ್ಷರಿಕೇ ದೇವಿ ನಾರಾಯಣಿ ನಮೋಽಸ್ತು ತೇ ॥೧೨॥

---

೯. ಸಮಸ್ತ ಮಂಗಳಗಳನ್ನು ಕರುಣಿಸುವ ಮಂಗಳಮೂರ್ತಿಯೆ! ಶಾಂತಸ್ವರೂಪಳೆ! ಸಮಸ್ತ ಇಷ್ಟಾರ್ಥಗಳನ್ನು ಸಾಧಿಸುವವಳೇ! ಶರಣಾಗತ-ವತ್ಸಲಳೇ! ಮೂರು ಕಣ್ಣುಗಳಿಂದ ಕೂಡಿದವಳೇ! ಪಾರ್ವತೀರೂಪಳೇ! ಮತ್ತು ನಾರಾಯಣನ ಪ್ರಿಯೆಯೆ! ನಿನ್ನನ್ನು ಪುನಃ ಪುನಃ ವಂದಿಸುವೆವು.

೧೦. ಪ್ರಪಂಚದ ಸೃಷ್ಟಿ-ಸ್ಥಿತಿ-ಸಂಹಾರಗಳಿಗೆ ಕಾರಣಳಾದ ಶಕ್ತಿ-ಸ್ವರೂಪಳೂ, ಅನಾದಿಯೂ, ಸತ್ತ್ವ-ರಜ-ತಮ ಎಂಬ ಗುಣಗಳಿಗೆ ಆಶ್ರಯಳೂ ಮತ್ತು ಗುಣಮಯವಾದ ಪ್ರವೃತ್ತಿಯುಳ್ಳವಳೂ ಆದ ನಾರಾಯಣಿಯೆ! ನಿನ್ನನ್ನು ವಂದಿಸುವೆವು.

೧೧. ಶರಣುಹೊಂದಿದ ದೀನರೂ, ನೊಂದವರೂ ಆದ ಜನರನ್ನು ರಕ್ಷಿಸುವ ಆಸಕ್ತಿಯನ್ನು ಹೊಂದಿರುವವಳೂ, ಮತ್ತು ಲೋಕದಲ್ಲಿ ಎಲ್ಲ ಭಕ್ತ-ಜನರ ಸಂಕಟಗಳನ್ನು ನೀಗಿಸುವವಳೂ ಆದ ನಾರಾಯಣೀ ದೇವಿಯನ್ನು ನಮಸ್ಕರಿಸುತ್ತೇವೆ.

೧೨. ದೇವಿಯೆ! ಹಂಸಗಳಿಂದ ಶೋಭಿಸುವ ವಿಮಾನದಲ್ಲಿ ಕುಳಿತು-ಕೊಂಡವಳೂ, ಕಮಂಡಲುವಿನ ದರ್ಭೋದಕವನ್ನು ಆಯುಧವನ್ನಾಗಿ ಉಪಯೋಗಿಸುವವಳೂ ಆದ ಬ್ರಹ್ಮಾಣೀರೂಪವನ್ನು ಧರಿಸಿದವಳು ನೀನು. ಇಂತಹ ನಾರಾಯಣಿಯನ್ನು ನಮಸ್ಕರಿಸುತ್ತೇವೆ.

**ತ್ರಿಶೂಲಚನ್ದ್ರಾಹಿಧರೇ ಮಹಾವೃಷಭವಾಹಿನಿ ।**
**ಮಾಹೇಶ್ವರೀಸ್ವರೂಪೇಣ ನಾರಾಯಣಿ ನಮೋಽಸ್ತು ತೇ ॥೧೩॥**

**ಮಯೂರಕುಕ್ಕುಟವೃತೇ ಮಹಾಶಕ್ತಿಧರೇಽನಘೇ ।**
**ಕೌಮಾರೀರೂಪಸಂಸ್ಥಾನೇ ನಾರಾಯಣಿ ನಮೋಽಸ್ತು ತೇ ॥೧೪॥**

**ಶಙ್ಖಚಕ್ರಗದಾಶಾರ್ಙ್ಗಗೃಹೀತಪರಮಾಯುಧೇ ।**
**ಪ್ರಸೀದ ವೈಷ್ಣವೀರೂಪೇ ನಾರಾಯಣಿ ನಮೋಽಸ್ತು ತೇ ॥೧೫॥**

**ಗೃಹೀತೋಗ್ರಮಹಾಚಕ್ರೇ ದಂಷ್ಟ್ರೋದ್ಧೃತವಸುನ್ಧರೇ ।**
**ವರಾಹರೂಪಿಣಿ ಶಿವೇ ನಾರಾಯಣಿ ನಮೋಽಸ್ತು ತೇ ॥೧೬॥**

---

೧೩. ತ್ರಿಶೂಲಾಯುಧ, ಚಂದ್ರಕಲೆ, ನಾಗಾಭರಣಗಳನ್ನು ಧರಿಸಿ-ದವಳೂ, ಮಹತ್ತಾದ ವೃಷಭವಾಹನವನ್ನು ಏರಿದವಳೂ ಆದ ಮಾಹೇಶ್ವರೀ-ರೂಪದಿಂದ ಇರುವ ನಾರಾಯಣೀದೇವಿಯೆ ! ನಿನ್ನನ್ನು ನಾವು ವಂದಿಸುವೆವು.

೧೪. ವಾಹನ ಮತ್ತು ಧ್ವಜರೂಪದಿಂದ ನವಿಲು-ಕುಕ್ಕುಟಗಳಿಂದ ಕೂಡಿರುವ, ಮಹತ್ತಾದ ಶಕ್ತ್ಯಾಯುಧವನ್ನು ಧರಿಸಿರುವ, ನಿಷ್ಕಲಂಕಳಾದ, ಮತ್ತು ಕುಮಾರಸ್ವಾಮಿಯ ರೂಪದಿಂದ ರಾಜಿಸುವ ಕುಮಾರಶಕ್ತಿಸ್ವರೂಪಳಾದ ನಾರಾಯಣಿಯೆ ! ನಿನ್ನನ್ನು ನಾವೆಲ್ಲರು ನಮಸ್ಕರಿಸುತ್ತೇವೆ.

೧೫. ಮತ್ತು ಶಂಖ-ಚಕ್ರ-ಗದೆ-ಶಾರ್ಙ್ಗ ಮುಂತಾದ ಉತ್ತಮಾ-ಯುಧಗಳನ್ನು ಧರಿಸಿದವಳೇ ! ವೈಷ್ಣವೀಶಕ್ತಿರೂಪಳೇ ! ನೀನು ಪ್ರಸನ್ನಳಾಗು. ನಾರಾಯಣನ ಪ್ರಿಯೆಯಾದ ಮಹಾಲಕ್ಷ್ಮಿಯೆ ! ನಿನಗೆ ನಮಸ್ಕಾರವು.

೧೬. ಧರಿಸಲ್ಪಟ್ಟ ಭಯಂಕರವಾದ ಚಕ್ರಾಯುಧವುಳ್ಳವಳೇ ! ಕೋರೆ-ಹಲ್ಲಿನ ತುದಿಯಿಂದ ಭೂಮಿಯನ್ನು ಮೇಲಕ್ಕೆ ಎತ್ತಿದವಳೇ ! ವರಾಹಮೂರ್ತಿಯ ಶಕ್ತಿಸ್ವರೂಪಳೇ ! ಮಂಗಳಕರಳೇ ! ಮತ್ತು ನಾರಾಯಣಿಯೆ ! ನಿನ್ನನ್ನು ವಂದಿಸುವೆವು.

ನೃಸಿಹ್ಮರೂಪೇಣೋಗ್ರೇಣ ಹನ್ತುಂ ದೈತ್ಯಾನ್ಕೃತೋದ್ಯಮೇ ।
ತ್ರೈಲೋಕ್ಯತ್ರಾಣಸಹಿತೇ ನಾರಾಯಣಿ ನಮೋಽಸ್ತು ತೇ ೧೭॥

ಕಿರೀಟಿನಿ ಮಹಾವಜ್ರೇ ಸಹಸ್ರನಯನೋಜ್ಜ್ವಲೇ ।
ವೃತ್ರಪ್ರಾಣಹರೇ ಚೈನ್ದ್ರಿ ನಾರಾಯಣಿ ನಮೋಽಸ್ತು ತೇ ॥೧೮॥

ಶಿವದೂತೀಸ್ವರೂಪೇಣ ಹತದೈತ್ಯೇ ಮಹಾಬಲೇ ।
ಘೋರರೂಪೇ ಮಹಾರಾವೇ ನಾರಾಯಣಿ ನಮೋಽಸ್ತು ತೇ ॥೧೯॥

ದಂಷ್ಟ್ರಾಕರಾಲವದನೇ ಶಿರೋಮಾಲಾವಿಭೂಷಣೇ ।
ಚಾಮುಣ್ಡೇ ಮುಣ್ಡಮಥನೇ ನಾರಾಯಣಿ ನಮೋಽಸ್ತು ತೇ ॥೨೦॥

---

೧೭. ಭಯಂಕರವಾದ ನೃಸಿಂಹರೂಪದಿಂದ ದುಷ್ಟರಾಕ್ಷಸರನ್ನು ಸಂಹರಿಸಲು ಯತ್ನವನ್ನು ಮಾಡಿರುವ ನೃಸಿಹ್ಮಶಕ್ತಿಸ್ವರೂಪಳೇ ! ಮೂರು-ಲೋಕಗಳನ್ನು ರಕ್ಷಿಸುವ ಕಾರ್ಯದಿಂದ ಕೂಡಿದವಳೇ ! ನಾರಾಯಣಿಯೆ ! ನಿನ್ನನ್ನು ವಂದಿಸುವೆವು.

೧೮. ನಾರಾಯಣನ ಪ್ರಿಯೆಯೆ ! ಕಿರೀಟವನ್ನು ಧರಿಸಿರುವವಳೂ, ಸಹಸ್ರ ಕಣ್ಣುಗಳಿಂದ ಶೋಭಿತಳೂ, ಮತ್ತು ವೃತ್ರಾಸುರನ ಪ್ರಾಣಗಳನ್ನು ತೆಗೆದವಳೂ ಆದ ಇಂದ್ರಾಣೀ ಶಕ್ತಿಯು ನೀನಾಗಿದ್ದೀಯೆ. ನಿನ್ನನ್ನು ನಾವು ನಮಸ್ಕರಿಸುವೆವು.

೧೯. ಶಿವನನ್ನು ದೂತನನ್ನಾಗಿ ನಿಯೋಜಿಸಿದ ಶಿವದೂತಿ ಎಂಬ ದೇವಿಯ ಶಕ್ತಿರೂಪದಿಂದ ಅನೇಕ ದೈತ್ಯರನ್ನು ಮರ್ದಿಸಿದವಳೇ ! ಮಹಾ-ಬಲಿಷ್ಠಳೇ ! ಘೋರವಾದ ರೂಪವುಳ್ಳವಳೇ ! ದೊಡ್ಡ ಗರ್ಜನವುಳ್ಳವಳೇ ! ಮತ್ತು ನಾರಾಯಣಿಯೇ ! ನಿನಗೆ ನಮಸ್ಕಾರವು.

೨೦. ಕೋರೆಹಲ್ಲುಗಳಿಂದ ಭಯಂಕರವಾದ ಮುಖವುಳ್ಳವಳೇ ! ಮುಂಡ ಮಾಲಿಕೆಯ ಭೂಷಣವುಳ್ಳವಳೇ ! ಚಾಮುಂಡಾಂಬಿಕೆಯೇ ! ಮುಂಡಾಸುರ-ನನ್ನು ಭಂಜಿಸಿದವಳೇ ! ಮತ್ತು ನಾರಾಯಣೀಸ್ವರೂಪಳೇ ! ನಾವು ನಿನ್ನನ್ನು ವಂದಿಸುವೆವು.

ಲಕ್ಷ್ಮಿ ಲಜ್ಜೇ ಮಹಾವಿದ್ಯೇ ಶ್ರದ್ಧೇ ಪುಷ್ಟೇ ಸ್ವಧೇ ಧ್ರುವೇ ।
ಮಹಾರಾತ್ರೇ ಮಹಾಮಾಯೇ ನಾರಾಯಣಿ ನಮೋಽಸ್ತು ತೇ॥೨೧॥

ಮೇಧೇ ಸರಸ್ವತಿ ವರೇ ಭೂತಿ ಬಾಭ್ರವಿ ತಾಮಸಿ ।
ನಿಯತೇ ತ್ವಂ ಪ್ರಸೀದೇಶೇ ನಾರಾಯಣಿ ನಮೋಽಸ್ತು ತೇ ॥೨೨॥

ಸರ್ವತಃಪಾಣಿಪಾದಾನ್ತೇ ಸರ್ವತೋಽಕ್ಷಿಶಿರೋಮುಖಿ ।
ಸರ್ವತಃಶ್ರವಣಘ್ರಾಣೇ ನಾರಾಯಣಿ ನಮೋಽಸ್ತು ತೇ ॥೨೩॥

ಸರ್ವಸ್ವರೂಪೇ ಸರ್ವೇಶೇ ಸರ್ವಶಕ್ತಿಸಮನ್ವಿತೇ ।
ಭಯೇಭ್ಯಸ್ತ್ರಾಹಿ ನೋ ದೇವಿ ದುರ್ಗೇ ದೇವಿ ನಮೋಽಸ್ತು ತೇ॥೨೪॥

---

೨೧. ಭೋಗಸಾಧನವಾದ ಐಶ್ವರ್ಯರೂಪಳೇ ! ಲಜ್ಜಾಸ್ವರೂಪಳೇ ! ತತ್ತ್ವಜ್ಞಾನವನ್ನು ಹೊಂದಿಸುವ ಮಹಾವಿದ್ಯಾರೂಪಿಣಿಯೇ ! ಶ್ರದ್ಧಾಸ್ವರೂಪಳೇ ! ಜಗತ್ತಿನ ಪುಷ್ಟಿಸ್ವರೂಪಳೇ ! ಸ್ವಧಾಮಂತ್ರಸ್ವರೂಪಿಣಿಯೆ ! ಶಾಶ್ವತಳೇ ! ಪ್ರಲಯವನ್ನುಂಟುಮಾಡುವ ಮಹಾರಾತ್ರಿಸ್ವರೂಪಳೆ ! ಮಹಾಮಾಯಾರೂಪಿಣಿಯೆ ! ಮತ್ತು ನಾರಾಯಣಿಯೆ ! ನಿನಗೆ ನಮಸ್ಕಾರವು.

೨೨. ಧಾರಣಾರೂಪವಾದ ಬುದ್ಧಿರೂಪಳೇ ! ಸರಸ್ವತೀದೇವಿಯೇ ! ಐಶ್ವರ್ಯರೂಪಳೇ ! ವಿಷ್ಣುಭಗಿನೀಸ್ವರೂಪಳೇ ! ಸಂಹಾರಮಾಡುವ ತಾಮಸೀಮೂರ್ತಿಯೆ ! ನಿಯಮವತಿಯೆ ! ಈಶ್ವರಾತ್ಮಕಳೇ ! ನೀನು ನಮ್ಮಲ್ಲಿ ಅನುಗ್ರಹತೋರು. ನಾರಾಯಣಿಯೇ ! ನಾವು ವಂದಿಸುವೆವು.

೨೩. ಎಲ್ಲ ಕಡೆಯಲ್ಲಿಯೂ ಕೈಕಾಲುಗಳ ಅಗ್ರವುಳ್ಳವಳೇ ! ಸರ್ವದಿಕ್ಕುಗಳಲ್ಲಿ ಕಣ್ಣು-ತಲೆ-ಮುಖಗಳುಳ್ಳವಳೇ ! ಎಲ್ಲೆಡೆಗಳಲ್ಲಿಯೂ ಶ್ರೋತ್ರ-ಘ್ರಾಣ ಇಂದ್ರಿಯಗಳುಳ್ಳವಳೇ ! ಮತ್ತು ನಾರಾಯಣಿಯೆ ! ನಿನ್ನನ್ನು ನಾವು ನಮಸ್ಕರಿಸುವೆವು.

೨೪. ಸರ್ವ ವಿಶ್ವದ ಸ್ವರೂಪವನ್ನು ಹೊಂದಿದವಳೇ ! ಸರ್ವ ವಿಶ್ವದ ಈಶ್ವರಿಯೆ ! ಸರ್ವ ಶಕ್ತಿಗಳಿಂದ ಪರಿಪೂರ್ಣಳೇ ! ದುರ್ಗಾದೇವಿಯೆ ! ನಮ್ಮನ್ನು ಸಮಸ್ತಭಯಗಳಿಂದ ರಕ್ಷಣಮಾಡು. ದೇವಿಯೆ ! ನಿನಗೆ ನಮಸ್ಕಾರವು.

ಏತತ್ತೇ ವದನಂ ಸೌಮ್ಯಂ ಲೋಚನತ್ರಯಭೂಷಿತಮ್ ।
ಪಾತು ನಃ ಸರ್ವಭೀತಿಭ್ಯಃ ಕಾತ್ಯಾಯನಿ ನಮೋಽಸ್ತು ತೇ ॥೨೫॥

ಜ್ವಾಲಾಕರಾಲಮತ್ಯುಗ್ರಮಶೇಷಾಸುರಸೂದನಮ್ ।
ತ್ರಿಶೂಲಂ ಪಾತು ನೋ ಭೀತೇರ್ಭದ್ರಕಾಲಿ ನಮೋಽಸ್ತು ತೇ ॥೨೬॥

ಹಿನಸ್ತಿ ದೈತ್ಯತೇಜಾಂಸಿ ಸ್ವನೇನಾಪೂರ್ಯ ಯಾ ಜಗತ್ ।
ಸಾ ಘಣ್ಟಾ ಪಾತು ನೋ ದೇವಿ ಪಾಪೇಭ್ಯೋ ನಃ ಸುತಾನಿವ ॥೨೭॥

ಅಸುರಾಸೃಗ್ವಸಾಪಙ್ಕಚರ್ಚಿತಸ್ತೇ ಕರೋಜ್ಜ್ವಲಃ ।
ಶುಭಾಯ ಖಡ್ಗೋ ಭವತು ಚಣ್ಡಿಕೇ ತ್ವಾಂ ನತಾ ವಯಮ್॥೨೮॥

---

೨೫. ಕಾತ್ಯಾಯಿನೀಸ್ವರೂಪಳಾದ ಮಹಾದೇವಿಯೇ! ಮೂರು ಕಣ್ಣುಗಳಿಂದ ಶೋಭಿಸುವ ಈ ನಿನ್ನ ಸೌಮ್ಯವಾದ ಮುಖವು ನಮ್ಮನ್ನು ಸಮಸ್ತ ಭೀತಿಗಳಿಂದ ರಕ್ಷಿಸಲಿ. ಮಹಾದೇವಿಯೆ! ನಿನ್ನನ್ನು ನಾವು ವಂದಿಸುವೆವು.

೨೬. ಮಂಗಳ-ಭೀಷಣ ರೂಪಗಳಿಂದ ಭದ್ರಕಾಳಿಯೆಂದು ಕರೆಯ-ಲ್ಪಡುವ ದೇವಿಯೆ! ಜ್ವಾಲೆಗಳಿಂದ ಭಯಂಕರವೂ, ಘೋರರೂಪವೂ, ನಿಶ್ಶೇಷವಾಗಿ ರಾಕ್ಷಸರನ್ನು ಧ್ವಂಸಮಾಡುವುದೂ ಆದ ನಿನ್ನ ತ್ರಿಶೂಲವು ನಮ್ಮನ್ನು ಭಯದಿಂದ ಪಾರುಮಾಡಲಿ. ನಿನಗೆ ನಮಸ್ಕಾರವು.

೨೭. ಯಾವ ಘಂಟೆಯು ತನ್ನ ಭಾರಿಯಾದ ನಾದದಿಂದ ಲೋಕ-ವನ್ನು ತುಂಬಿಸಿ ಸಮಸ್ತ ಅಸುರರ ತೇಜಸ್ಸನ್ನು ಅಡಗಿಸುವುದೋ ಅಂತಹ ನಿನ್ನ ಘಂಟೆಯು ನಮ್ಮನ್ನು ಮಕ್ಕಳನ್ನು ಹೇಗೋ ಹಾಗೆ ಪಾಪಫಲಗಳಿಂದ ರಕ್ಷಿಸಲಿ.

೨೮. ಚಂಡಿಕಾಂಬಿಕೆಯೇ! ನಾವು ನಿನ್ನನ್ನು ನಮಸ್ಕರಿಸಿದವರಾಗಿ-ದ್ದೇವೆ. ಅಸುರರ ರಕ್ತ-ವಸಾ ಧಾತುಗಳ ಕೆಸರಿನಿಂದ ಲೇಪಿಸಲ್ಪಟ್ಟ, ನಿನ್ನ ಹಸ್ತಸಂಗದಿಂದ ಉಜ್ವಲವಾದ ಖಡ್ಗವು ನಮಗೆ ಮಂಗಳವನ್ನು ಉಂಟುಮಾಡಲಿ.

ರೋಗಾನಶೇಷಾನಪಹಂಸಿ ತುಷ್ಟಾ
ದದಾಸಿ ಕಾಮಾನ್ಸಕಲಾನಭೀಷ್ಟಾನ್ ।
ತ್ವಾಮಾಶ್ರಿತಾನಾಂ ನ ವಿಪನ್ನರಾಣಾಂ
ತ್ವಾಮಾಶ್ರಿತಾ ಹ್ಯಾಶ್ರಯತಾಂ ಪ್ರಯಾನ್ತಿ ॥೨೯॥

ಏತತ್ಕೃತಂ ಯತ್ಕದನಂ ತ್ವಯಾದ್ಯ
ಧರ್ಮದ್ವಿಷಾಂ ದೇವಿ ಮಹಾಸುರಾಣಾಮ್ ।
ರೂಪೈರನೇಕೈರ್ಬಹುಧಾತ್ಮಮೂರ್ತಿಂ
ಕೃತ್ವಾಮ್ಬಿಕೇ ತತ್ಪ್ರಕರೋತಿ ಕಾನ್ಯಾ ॥೩೦॥

ವಿದ್ಯಾಸು ಶಾಸ್ತ್ರೇಷು ವಿವೇಕದೀಪೇ-
ಷ್ವಾದ್ಯೇಷು ವಾಕ್ಯೇಷು ಚ ಕಾ ತ್ವದನ್ಯಾ ।
ಮಮತ್ವಗರ್ತೇಽತಿಮಹಾನ್ಧಕಾರೇ
ವಿಭ್ರಾಮಯಸ್ಯೇತದತೀವ ವಿಶ್ವಮ್ ॥೩೧॥

---

೨೯. ಭಕ್ತರಲ್ಲಿ ಸಂತೋಷಗೊಂಡ ನೀನು ಅಶೇಷವಾದ ರೋಗಗಳನ್ನು ಪರಿಹಾರಮಾಡುತ್ತೀಯೆ. ಇಷ್ಟವಾದ ಸಕಲ ಮನೋರಥಗಳನ್ನು ಕೊಡುತ್ತೀಯೆ. ನಿನ್ನನ್ನು ಆಶ್ರಯಿಸಿದ ಭಕ್ತಜನರಿಗೆ ವಿಪತ್ತು ಸಂಭವಿಸುವುದಿಲ್ಲ. ಮತ್ತು ನಿನ್ನನ್ನು ಆಶ್ರಯಿಸಿದವರು ಪರರಿಗೆ ಆಶ್ರಯದಾತರಾಗುವರು.

೩೦. ಮಹಾದೇವಿಯೆ! ಇಂದು ಧರ್ಮಮಾರ್ಗವನ್ನು ದ್ವೇಷಿಸುವ ಮಹಾಸುರರೊಡನೆ ಈ ಮಹಾಸಂಗ್ರಾಮವನ್ನು ನೀನು ಅನೇಕರೂಪಗಳಿಂದ ವಿಧವಿಧವಾದ ವ್ಯಷ್ಟಿಮೂರ್ತಿಗಳನ್ನು ಸ್ವೀಕರಿಸಿ ಮಾಡಿರುತ್ತೀಯೆ. ಈ ಲೋಕೋಪಕಾರವನ್ನು ಇನ್ನಾರು ಮಾಡಬಲ್ಲರು?

೩೧. ವಿವೇಕವನ್ನು ಉಜ್ವಲಗೊಳಿಸುವ ದೀಪಗಳಂತಿರುವ ಅನೇಕ ವಿದ್ಯೆಗಳು, ಶಾಸ್ತ್ರಗಳು ಮತ್ತು ಪುರಾತನವಾದ ವೇದವಾಙ್ಮಯಗಳು—ಇವುಗಳನ್ನು ಮೂಲೆಗೊತ್ತಿ ಮಹತ್ತಾದ ಅಂಧಕಾರದಿಂದ ತುಂಬಿದ ಮಮತ್ವ ಅಭಿಮಾನವೆಂಬ ದೊಡ್ಡ ಹಳ್ಳದಲ್ಲಿ ಹಾಕಿ ವಿಶ್ವವನ್ನು ತಿರುಗಿಸುತ್ತಿದ್ದೀಯೆ. ಅಂತಹ ಮಾಯೆಯು ನೀನಲ್ಲದೆ ಮತ್ತಾರು?

ರಕ್ಷಾಂಸಿ ಯತ್ರೋಗ್ರವಿಷಾಶ್ಚ ನಾಗಾ
ಯತ್ರಾರಯೋ ದಸ್ಯುಬಲಾನಿ ಯತ್ರ ।
ದಾವಾನಲೋ ಯತ್ರ ತಥಾಬ್ಧಿಮಧ್ಯೇ
ತತ್ರ ಸ್ಥಿತಾ ತ್ವಂ ಪರಿಪಾಸಿ ವಿಶ್ವಮ್ ॥೩೨॥

ವಿಶ್ವೇಶ್ವರೀ ತ್ವಂ ಪರಿಪಾಸಿ ವಿಶ್ವಂ
ವಿಶ್ವಾತ್ಮಿಕಾ ಧಾರಯಸೀತಿ ವಿಶ್ವಮ್ ।
ವಿಶ್ವೇಶವನ್ದ್ಯಾ ಭವತೀ ಭವನ್ತಿ
ವಿಶ್ವಾಶ್ರಯಾ ಯೇ ತ್ವಯಿ ಭಕ್ತಿನಮ್ರಾಃ ॥೩೩॥

ದೇವಿ ಪ್ರಸೀದ ಪರಿಪಾಲಯ ನೋಽರಿಭೀತೇ-
ರ್ನಿತ್ಯಂ ಯಥಾಸುರವಧಾದಧುನೈವ ಸದ್ಯಃ ।
ಪಾಪಾನಿ ಸರ್ವಜಗತಾಂ ಪ್ರಶಮಂ ನಯಾಶು
ಉತ್ಪಾತಪಾಕಜನಿತಾಂಶ್ಚ ತಥೋಪಸರ್ಗಾನ್ ॥೩೪॥

---

೩೨. ಎಲ್ಲಿ ಪರೋಪದ್ರವವನ್ನು ಮಾಡುತ್ತ ರಾಕ್ಷಸರಿರುವರೋ, ಎಲ್ಲಿ ಹಿಂಸೆಯನ್ನು ಕೊಡುವ ಉಗ್ರವಿಷದಿಂದ ಕೂಡಿದ ಸರ್ಪಗಳಿವೆಯೋ, ಎಲ್ಲಿ ಕಳ್ಳಕಾಕರಿರುವರೋ, ಎಲ್ಲಿ ಕಾಡುಕಿಚ್ಚಿನ ಪೀಡೆಯಿರುವುದೊ ಅಥವಾ ಎಲ್ಲಿ ಸಮುದ್ರದ ಭೀತಿಯಿರುವುದೋ ಅಲ್ಲೆಲ್ಲ ನೀನು ಇದ್ದು ಅಪಾಯಕ್ಕೆ ಈಡಾಗ-ಬಾರದ ಶಿಷ್ಟರನ್ನು ಪಾಲಿಸುತ್ತ ವಿಶ್ವವನ್ನು ರಕ್ಷಿಸುತ್ತೀಯೆ.

೩೩. ನೀನು ವಿಶ್ವದ ಈಶ್ವರಿಯಾಗಿದ್ದು ವಿಶ್ವವನ್ನು ಸಂರಕ್ಷಿಸುತ್ತೀಯೆ. ನೀನು ವಿಶ್ವರೂಪಿಣಿಯಾಗಿದ್ದು ವಿಶ್ವವನ್ನು ಧರಿಸಿಕೊಂಡಿದ್ದೀಯೆ. ನೀನು ವಿಶ್ವೇಶ್ವರರಿಂದ ನಮಸ್ಕಾರ್ಯಳಾಗಿದ್ದೀಯೆ, ಮತ್ತು ಯಾವ ಸಾಧುಜನರು ನಿನ್ನಲ್ಲಿ ಭಕ್ತಿಯಿಂದ ನಮ್ರರಾಗಿ ವರ್ತಿಸುವರೊ ಅವರು ವಿಶ್ವಕ್ಕೆ ಆಶ್ರಯದಾತ-ರಾಗಿರುವರು.

೩೪. ದೇವಿಯೇ! ಈಗ ಅಸುರರನ್ನು ವಧಿಸಿ ಶತ್ರುಭಯದಿಂದ ನಮ್ಮನ್ನು ರಕ್ಷಿಸಿದಂತೆ ಎಂದೆಂದೂ ಕೂಡಲೆ ನಮ್ಮನ್ನು ಶತ್ರುಭಯದಿಂದ ಸಂರಕ್ಷಣಮಾಡು. ನಮ್ಮಲ್ಲಿ ಅನುಗ್ರಹವನ್ನಿಡು. ಸಮಸ್ತ ವಿಶ್ವಕ್ಕೆ ಉಂಟಾ-ಗುವ ಅನರ್ಥವನ್ನು ನಿವಾರಿಸು. ಮತ್ತು ಉತ್ಪಾತಕಾಲದ ಪರಿಣಾಮದಿಂದ ಸಂಭವಿಸುವ ವಧ ಮುಂತಾದ ಉಪದ್ರವಗಳನ್ನು ಶಮನಮಾಡು.

ಪ್ರಣತಾನಾಂ ಪ್ರಸೀದ ತ್ವಂ ದೇವಿ ವಿಶ್ವಾರ್ತಿಹಾರಿಣಿ ।
ತ್ರೈಲೋಕ್ಯವಾಸಿನಾಮೀಡ್ಯೇ ಲೋಕಾನಾಂ ವರದಾ ಭವ ॥೩೫॥

ಶ್ರೀದೇವ್ಯುವಾಚ :—

ವರದಾಹಂ ಸುರಗಣಾ ವರಂ ಯಂ ಮನಸೇಚ್ಛಥ ।
ತಂ ವೃಣುಧ್ವಂ ಪ್ರಯಚ್ಛಾಮಿ ಜಗತಾಮುಪಕಾರಕಮ್ ॥೩೬॥

ದೇವಾ ಊಚುಃ :—

ಸರ್ವಬಾಧಾಪ್ರಶಮನಂ ತ್ರೈಲೋಕ್ಯಸ್ಯಾಖಿಲೇಶ್ವರಿ ।
ಏವಮೇತತ್ತ್ವಯಾ ಕಾರ್ಯಮಸ್ಮದ್ವೈರಿವಿನಾಶನಮ್ ॥೩೭॥

---

೩೫. ವಿಶ್ವದ ಸಂಕಟವನ್ನು ಪರಿಹರಿಸುವವಳೇ! ತ್ರಿಲೋಕಗಳಲ್ಲಿ ವಾಸಮಾಡುವ ಸಮಸ್ತರಿಗೂ ಪೂಜ್ಯಳಾದವಳೇ! ಮಹಾದೇವಿಯೆ! ನಿನ್ನನ್ನು ವಂದಿಸುತ್ತಿದ್ದ ನಮ್ಮಲ್ಲಿ ಅನುಗ್ರಹ ತೋರು. ಲೋಕಕಲ್ಯಾಣವಾಗುವಂತೆ ವರಗಳನ್ನು ಕೊಡು.

ದೇವಿಯು ಇಂತೆಂದಳು :—

೩೬. ಎಲೈ ದೇವವೃಂದವೇ! ನಾನು ನಿಮ್ಮಲ್ಲಿ ಸುಪ್ರೀತಳಾಗಿ ವರವನ್ನು ಕೊಡುವವಳಾಗಿದ್ದೇನೆ. ಜಗತ್ತಿಗೆ ಉಪಕಾರವಾಗುವಂತಹ ಯಾವ ವರವನ್ನು ನೀವು ಮನಸ್ಸಿನಲ್ಲಿ ಆಶಿಸುವಿರೋ ಅದನ್ನು ಕೇಳಿರಿ. ನಾನು ಆ ವರವನ್ನು ಕೊಡುವೆನು.

ದೇವತೆಗಳು ನುಡಿದರು :—

೩೭ ಸರ್ವೇಶ್ವರಿಯಾದ ದೇವಿಯೇ! ನೀನು ಈಗ ಮಾಡಿದಂತೆ ಯಾವಾಗಲೂ ತ್ರೈಲೋಕ್ಯಕ್ಕೆ ಸಂಭವಿಸುವ ಪೀಡೆಗಳ ಪರಿಹಾರವನ್ನು ಮಾಡಬೇಕು. ಮತ್ತು ನಮ್ಮಿಂದ ಸಂಹರಿಸಲಾಗದ ನಮ್ಮ ಶತ್ರುಗಳನ್ನು ಸಂಹರಿಸಬೇಕು.

ಶ್ರೀದೇವ್ಯುವಾಚ :—

ವೈವಸ್ವತೇಽನ್ತರೇ ಪ್ರಾಪ್ತೇ ಅಷ್ಟಾವಿಂಶತಿಮೇ ಯುಗೇ ।
ಶುಮ್ಭೋ ನಿಶುಮ್ಭಶ್ಚೈವಾನ್ಯಾವುತ್ಪತ್ಸ್ಯೇತೇ ಮಹಾಸುರೌ ॥೩೮॥

ನನ್ದಗೋಪಕುಲೇ ಜಾತಾ ಯಶೋದಾಗರ್ಭಸಮ್ಭವಾ ।
ತತಸ್ತೌ ನಾಶಯಿಷ್ಯಾಮಿ ವಿನ್ಧ್ಯಾಚಲನಿವಾಸಿನೀ ॥೩೯॥

ಪುನರಪ್ಯತಿರೌದ್ರೇಣ ರೂಪೇಣ ಪೃಥಿವೀತಲೇ ।
ಅವತೀರ್ಯ ಹನಿಷ್ಯಾಮಿ ವೈಪ್ರಚಿತ್ತಾಂಸ್ತು ದಾನವಾನ್ ॥೪೦॥

ಭಕ್ಷಯನ್ತ್ಯಾಶ್ಚ ತಾನುಗ್ರಾನ್ವೈಪ್ರಚಿತ್ತಾನ್ ಸುದಾನವಾನ್ ।
ರಕ್ತಾ ದನ್ತಾ ಭವಿಷ್ಯನ್ತಿ ದಾಡಿಮೀಕುಸುಮೋಪಮಾಃ ॥೪೧॥

---

ದೇವಿಯು ಹೇಳಿದಳು :—

೩೮. ಮುಂದೆ ಬರುವ ವೈವಸ್ವತ ಮನ್ವಂತರದಲ್ಲಿ ಇಪ್ಪತ್ತೆಂಟನೆಯ ಯುಗಪರ್ಯಾಯದಲ್ಲಿ ಶುಂಭ–ನಿಶುಂಭರೆಂದು ವಿಖ್ಯಾತರಾದ ಮತ್ತೆ ಇಬ್ಬರು ಮಹಾಸುರರು ಜನಿಸುವರು.

೩೯. ಆಗ ವಿಂಧ್ಯಾಚಲದಲ್ಲಿ ವಾಸಮಾಡುವ ನಾನು ನಂದಗೋಪನ ಮನೆಯಲ್ಲಿ ಅವನ ಪತ್ನಿಯಾದ ಯಶೋದೆಯ ಗರ್ಭದಲ್ಲಿ ಜನ್ಮವೆತ್ತಿ ಬಂದು ಆ ಶುಂಭ–ನಿಶುಂಭ ಅಸುರರನ್ನು ವಧಿಸುತ್ತೇನೆ.

೪೦. ಮತ್ತು ಆ ಸಮಯದಲ್ಲಿ ಅತಿ ಭಯಂಕರವಾದ ರೂಪದಿಂದ ಭೂಮಂಡಲದಲ್ಲಿ ಮತ್ತೊಮ್ಮೆ ಅವತರಿಸಿ ಸಾಧುದ್ವೇಷಿಯಾದ ವಿಪ್ರಚಿತ್ತಿ ಎಂಬ ದಾನವನ ಪುತ್ರರನ್ನು ವಧಿಸುವೆನು.

೪೧. ಹಾಗೆ ವಿಪ್ರಚಿತ್ತಿದಾನವನ ಸಂತತಿಗೆ ಸೇರಿದ ಉಗ್ರಸ್ವಭಾವದ ದಾನವೋತ್ತಮರನ್ನು ಭಕ್ಷಿಸುತ್ತಿರುವ ನನ್ನ ಹಲ್ಲುಗಳು ದಾಡಿಂಬಕುಸುಮಗಳಂತೆ ಕೆಂಪುಬಣ್ಣವುಳ್ಳವುಗಳಾಗುತ್ತವೆ.

ತತೋ ಮಾಂ ದೇವತಾಃ ಸ್ವರ್ಗೇ ಮರ್ತ್ಯಲೋಕೇ ಚ ಮಾನವಾಃ ।
ಸ್ತುವನ್ತೋ ವ್ಯಾಹರಿಷ್ಯನ್ತಿ ಸತತಂ ರಕ್ತದನ್ತಿಕಾಮ್ ॥೪೨॥

ಭೂಯಶ್ಚ ಶತವಾರ್ಷಿಕ್ಯಾಮನಾವೃಷ್ಟ್ಯಾಮನಮ್ಭಸಿ ।
ಮುನಿಭಿಃ ಸಂಸ್ತುತಾ ಭೂಮೌ ಸಮ್ಭವಿಷ್ಯಾಮ್ಯಯೋನಿಜಾ ॥೪೩॥

ತತಃ ಶತೇನ ನೇತ್ರಾಣಾಂ ನಿರೀಕ್ಷಿಷ್ಯಾಮಿ ಯನ್ಮುನೀನ್ ।
ಕೀರ್ತಯಿಷ್ಯನ್ತಿ ಮನುಜಾಃ ಶತಾಕ್ಷೀಮಿತಿ ಮಾಂ ತತಃ ॥೪೪॥

ತತೋಽಹಮಖಿಲಂ ಲೋಕಮಾತ್ಮದೇಹಸಮುದ್ಭವೈಃ ।
ಭರಿಷ್ಯಾಮಿ ಸುರಾಃ ಶಾಕೈರಾವೃಷ್ಟೇಃ ಪ್ರಾಣಧಾರಕೈಃ ॥೪೫॥

---

೪೨. ಆದರಿಂದ ಮರ್ತ್ಯಲೋಕದಲ್ಲಿ ಮಾನವರು ಮತ್ತು ದೇವ-ಲೋಕದಲ್ಲಿ ದೇವತೆಗಳು ನನ್ನನ್ನು ಭಕ್ತಿಯಿಂದ ಸ್ತುತಿಸುವಾಗ ಯಾವಾಗಲೂ ದಾನವ ವಧವನ್ನು ಸ್ಮರಿಸಿಕೊಂಡು ರಕ್ತದಂತಿಕಾ ಎಂಬ ಹೆಸರಿನಿಂದ ನನ್ನನ್ನು ಕೀರ್ತಿಸುವರು.

೪೩. ಮತ್ತೊಮ್ಮೆ ಒಂದು ನೂರು ವರ್ಷಗಳವರೆಗಿನ ಅನಾವೃಷ್ಟಿಯಿಂದ ಭೂಮಿಯಲ್ಲಿ ನೀರಿಲ್ಲದಂತಾಗಲು ಮುನಿಜನರಿಂದ ಸ್ತುತಿಸಲ್ಪಟ್ಟವಳಾಗಿ ಅಯೋನಿಜೆಯಾಗಿ ಹುಟ್ಟುವೆನು.

೪೪. ತರುವಾಯ ನಾನು ಮುನಿಜನರನ್ನು ಸಂಜೀವನಗೊಳಿಸಲು ಯಾವ ಕಾರಣ ಒಂದುನೂರು ಕಣ್ಣುಗಳಿಂದ ನೋಡುವೆನೊ ಅದರಿಂದ ಮಾನವರು ನನ್ನನ್ನು ಶತಾಕ್ಷೀ ಎಂಬ ಹೆಸರಿನಿಂದ ಕೀರ್ತಿಸುವರು.

೪೫. ತರುವಾಯ ನಾನು ನನ್ನ ದೇಹದಿಂದ ಹುಟ್ಟಿದ ಪ್ರಾಣಧಾರಣೆಗೆ ಸಾಧನವಾದ ಕಾಯಿ-ಪಲ್ಯಗಳಿಂದ ಮತ್ತೆ ಮಳೆಯು ಸುರಿಯುವಂತಾಗುವ-ವರೆಗೆ ಲೋಕವನ್ನು ಪೋಷಿಸುವೆನು.

ಶಾಕಮ್ಭರೀತಿ ವಿಖ್ಯಾತಿಂ ತದಾ ಯಾಸ್ಯಾಮ್ಯಹಂ ಭುವಿ ॥೪೬॥

ತತ್ರೈವ ಚ ವಧಿಷ್ಯಾಮಿ ದುರ್ಗಮಾಖ್ಯಂ ಮಹಾಸುರಮ್ ।
ದುರ್ಗಾ ದೇವೀತಿ ವಿಖ್ಯಾತಂ ತನ್ಮೇ ನಾಮ ಭವಿಷ್ಯತಿ ॥೪೭॥

ಪುನಶ್ಚಾಹಂ ಯದಾ ಭೀಮಂ ರೂಪಂ ಕೃತ್ವಾ ಹಿಮಾಚಲೇ ।
ರಕ್ಷಾಂಸಿ ಭಕ್ಷಯಿಷ್ಯಾಮಿ ಮುನೀನಾಂ ತ್ರಾಣಕಾರಣಾತ್ ॥೪೮॥

ತದಾ ಮಾಂ ಮುನಯಃ ಸರ್ವೇ ಸ್ತೋಷ್ಯನ್ತ್ಯಾನಮ್ರಮೂರ್ತಯಃ ।
ಭೀಮಾ ದೇವೀತಿ ವಿಖ್ಯಾತಂ ತನ್ಮೇ ನಾಮ ಭವಿಷ್ಯತಿ ॥೪೯॥

ಯದಾರುಣಾಖ್ಯಸ್ತ್ರೈಲೋಕ್ಯೇ ಮಹಾಬಾಧಾಂ ಕರಿಷ್ಯತಿ ।
ತದಾಹಂ ಭ್ರಾಮರಂ ರೂಪಂ ಕೃತ್ವಾ ಸಙ್ಖ್ಯೇಯಷಟ್ಪದಮ್ ॥೫೦॥

---

೪೬. ಹೀಗೆ ನಾನು ಅನಾವೃಷ್ಟಿಯಿಂದ ಲೋಕಕ್ಕೆ ಪ್ರಾಣಾಪಾಯವು ಒದಗಿರುವುದನ್ನು ನಿವಾರಿಸಲು ದೇಹದಿಂದ ಹುಟ್ಟಿದ ಶಾಕ (ಕಾಯಿಪಲ್ಯ) ಗಳಿಂದ ಭರಣ (ಪೋಷಣ) ಮಾಡಿರುವ ನಿಮಿತ್ತವಾಗಿ ಲೋಕದಲ್ಲಿ ಶಾಕಂಭರೀ ಎಂಬ ನಾಮದಿಂದ ಖ್ಯಾತಿಹೊಂದುವೆನು.

೪೭. ಆಗಲೆ ದುರ್ಗಮ ಎಂಬ ಹೆಸರಿನ ಮತ್ತೊಬ್ಬ ಉಗ್ರರಾಕ್ಷಸನನ್ನು ಲೋಕರಕ್ಷಣೆಗಾಗಿ ವಧಿಸುವೆನು. ದುರ್ಗಮನನ್ನು ಸಂಹರಿಸಿದ ನಿಮಿತ್ತದಿಂದ ನನಗೆ ದುರ್ಗಾ ಎಂಬ ಹೆಸರು ಲೋಕದಲ್ಲಿ ಖ್ಯಾತಿಯನ್ನು ಹೊಂದುವುದು.

೪೮. ಮತ್ತೆ ಒಂದು ಸಮಯದಲ್ಲಿ ನಾನು ಹಿಮಾಚಲಪರ್ವತದಲ್ಲಿ ಬಲು ಭಯಂಕರವಾದ ರೂಪವನ್ನು ಪರಿಗ್ರಹಿಸಿ ಮಹರ್ಷಿಗಳನ್ನು ರಕ್ಷಿಸುವ ನಿಮಿತ್ತವಾಗಿ ಮುನಿಪೀಡಕರಾದ ರಾಕ್ಷಸರನ್ನು ವಧಿಸುವೆನು.

೪೯. ಆಗ ಸಮಸ್ತ ಮುನಿಜನರು ಭಕ್ತಿಯಿಂದ ಬಾಗಿದ ಮೂರ್ತಿಯುಳ್ಳವರಾಗಿ ನನ್ನನ್ನು ಸ್ತುತಿಮಾಡುತ್ತಾರೆ. ಆಗ ಲೋಕದಲ್ಲಿ ನನಗೆ ಭೀಮಾದೇವಿಯೆಂದು ನಾಮಾಂಕನವು ಖ್ಯಾತಿಹೊಂದುವುದು.

೫೦. ಮತ್ತೊಮ್ಮೆ ಯಾವಾಗ ಅರುಣ ಎಂಬ ಹೆಸರಿನ ಮಹಾರಾಕ್ಷಸನು ತ್ರೈಲೋಕ್ಯಕ್ಕೆ ಮಹಾ ಉಪದ್ರವವನ್ನು ಉಂಟುಮಾಡುವನೋ ಆಗ ಸಂಖ್ಯಾತೀತವಾದ ದುಂಬಿಗಳ ಗುಂಪಿನ ರೂಪದಿಂದ ಭ್ರಾಮರರೂಪವನ್ನು ನಾನು ಸ್ವೀಕರಿಸುವೆನು.

ತ್ರೈಲೋಕ್ಯಸ್ಯ ಹಿತಾರ್ಥಾಯ ವಧಿಷ್ಯಾಮಿ ಮಹಾಸುರಮ್ ।
ಭ್ರಾಮರೀತಿ ಚ ಮಾಂ ಲೋಕಾಸ್ತದಾ ಸ್ತೋಷ್ಯನ್ತಿ ಸರ್ವತಃ ॥೫೧॥

ಇತ್ಥಂ ಯದಾ ಯದಾ ಬಾಧಾ ದಾನವೋತ್ಥಾ ಭವಿಷ್ಯತಿ ।
ತದಾ ತದಾವತೀರ್ಯಾಹಂ ಕರಿಷ್ಯಾಮ್ಯರಿಸಂಕ್ಷಯಮ್ ॥೫೨॥

ಇತಿ ಶ್ರೀ ಮಾರ್ಕಣ್ಡೇಯ ಮಹಾಪುರಾಣೇ ದೇವೀಮಾಹಾತ್ಮ್ಯೇ
ನಾರಾಯಣೀಸ್ತುತಿರ್ನಾಮ ಅಷ್ಟಾಶೀತಿತಮೋಽಧ್ಯಾಯಃ

---

೫೧. ಆ ಭ್ರಾಮರರೂಪದಿಂದ ದುಷ್ಟದಾನವನ ವಧೆಮಾಡಿ ತ್ರೈಲೋಕ್ಯಕ್ಕೆ ಹಿತವನ್ನು ಉಂಟುಮಾಡಲು ಅರುಣಾಸುರನನ್ನು ಸಂಹರಿಸುತ್ತೇನೆ. ಅಂದಿನಿಂದ ಜನರು ಎಲ್ಲೆಲ್ಲಿಯೂ ನನ್ನನ್ನು ಭ್ರಾಮರೀ ಎಂದು ಸ್ತುತಿಮಾಡುವರು.

೫೨. ಹೀಗೆ ತ್ರಿಲೋಕಗಳಲ್ಲಿ ದಾನವರಿಂದ ಸಂಭವಿಸುವ ಪೀಡೆಯ ನಿಮಿತ್ತವಾಗಿ ವಿಪತ್ತು ಯಾವಾಗ ಉಂಟಾಗುವುದೋ ಆಗ ನಾನು ಬಗೆಬಗೆಯ ರೂಪಗಳಿಂದ ಅವತರಿಸಿ ಬಂದು ಶತ್ರುಗಳನ್ನು ಸಂಹರಿಸಿ ತ್ರಿಲೋಕವನ್ನು ರಕ್ಷಿಸುವೆನು.

ಮಾರ್ಕಂಡೇಯ ಮಹಾಪುರಾಣದಲ್ಲಿ ಎಂಭತ್ತೆಂಟನೆಯ ಅಧ್ಯಾಯವು
ಮುಗಿದುದು.



|| ಓಂ ಶ್ರೀ ದುರ್ಗಾಯೈ ನಮಃ ||

# ಮಾರ್ಕಂಡೇಯ ಪುರಾಣಂ



## ಏಕೋನನವತಿತಮೋಽಧ್ಯಾಯಃ

### (ದೇವೀಚರಿತಶ್ರವಣಮ್—ದೇವಾನಾಂ ವರಲಾಭಃ)

ಶ್ರೀ ದೇವ್ಯುವಾಚ :—

ಏಭಿಃ ಸ್ತವೈಶ್ಚ ಮಾಂ ನಿತ್ಯಂ ಸ್ತೋಷ್ಯತೇ ಯಃ ಸಮಾಹಿತಃ ।
ತಸ್ಯಾಹಂ ಸಕಲಾಂ ಬಾಧಾಂ ಶಮಯಿಷ್ಯಾಮ್ಯಸಂಶಯಮ್ ||೧||

ಮಧುಕೈಟಭನಾಶಂ ಚ ಮಹಿಷಾಸುರಘಾತನಮ್ ।
ಕೀರ್ತಯಿಷ್ಯನ್ತಿ ಯೇ ತದ್ವದ್ವಧಂ ಶುಮ್ಭನಿಶುಮ್ಭಯೋಃ ||೨||

---

## ಎಂಭತ್ತೊಂಭತ್ತನೆಯ ಅಧ್ಯಾಯ

ದೇವಿಯು ಇಂತೆಂದಳು :—

೧. ಯಾವ ಪುರುಷನು ಭಕ್ತಿ-ಶ್ರದ್ಧೆಗಳಿಂದ ಕೂಡಿದವನಾಗಿ ಹಿಂದೆ ವರ್ಣಿಸಿದ ಸ್ತುತಿವಚನಗಳಿಂದ ಮತ್ತೆ ಮತ್ತೆ ನನ್ನನ್ನು ಸ್ತುತಿಮಾಡುವನೋ ಆ ಪುರುಷನ ಸಮಸ್ತ ಅನರ್ಥಬಾಧೆಗಳನ್ನು ನಾನು ಶಮನಮಾಡುವೆನು.

೨. ಹಿಂದೆ ಹೇಳಿದ ದೇವೀಮಾಹಾತ್ಮ್ಯವನ್ನು ಪ್ರಕಾಶಿಸುವ ಸ್ತುತಿಯಲ್ಲಿ ಮಧುಕೈಟಭ ಸಂಹಾರ, ಮಹಿಷಾಸುರ ಸಂಹಾರ ಮತ್ತು ಶುಂಭ-ನಿಶುಂಭ ಸಂಹಾರವೆಂಬ ಮೂರು ಚರಿತ್ರಗಳು ಮುಖ್ಯವಾಗಿವೆ. ಇವುಗಳನ್ನು ಹೇಳಿ ದೇವಿಯನ್ನು ಸ್ತುತಿಸಬೇಕು.

ಅಷ್ಟಮ್ಯಾಂ ಚ ಚತುರ್ದಶ್ಯಾಂ ನವಮ್ಯಾಂ ಚೈಕಚೇತಸಃ ।
ಶ್ರೋಷ್ಯನ್ತಿ ಚೈವ ಯೇ ಭಕ್ತ್ಯಾ ಮಮ ಮಾಹಾತ್ಮ್ಯಮುತ್ತಮಮ್ ॥೩॥

ನ ತೇಷಾಂ ದುಷ್ಕೃತಂ ಕಿಂಚಿದ್ದುಷ್ಕೃತೋತ್ಥಾ ನ ಚಾಪದಃ ।
ನ ಭವಿಷ್ಯತಿ ದಾರಿದ್ರ್ಯಂ ನ ಚೈವೇಷ್ಟವಿಯೋಜನಮ್ ॥೪॥

ಶತ್ರುತೋ ನ ಭಯಂ ತೇಷಾಂ ದಸ್ಯುತೋ ವಾ ನ ರಾಜತಃ ।
ನ ಶಸ್ತ್ರಾನಲತೋಯೌಘಾತ್ಕದಾಚಿತ್ಸಂಭವಿಷ್ಯತಿ ॥೫॥

ತಸ್ಮಾನ್ಮಮೈತನ್ಮಾಹಾತ್ಮ್ಯಂ ಪಠಿತವ್ಯಂ ಸಮಾಹಿತೈಃ ।
ಶ್ರೋತವ್ಯಂ ಚ ಸದಾ ಭಕ್ತ್ಯಾ ಪರಂ ಸ್ವಸ್ತ್ಯಯನಂ ಮಹತ್ ॥೬॥

---

೩. ಮಾನವರು ಭಕ್ತಿ-ಶ್ರದ್ಧಾವಂತರೂ ಮತ್ತು ಏಕಾಗ್ರತೆಯಿಂದ ಕೂಡಿದ ಮಾನಸವುಳ್ಳವರೂ ಆಗಿ ಅಷ್ಟಮೀ-ಚತುರ್ದಶೀ ಅಥವಾ ನವಮೀ ತಿಥಿಗಳಲ್ಲಿ ನನ್ನ ಸರ್ವೋತ್ತಮವಾದ ಮಾಹಾತ್ಮ್ಯವನ್ನು ಸ್ತೋತ್ರಮಾಡಬೇಕು.

೪. ಹಾಗೆ ಸ್ತುತಿಮಾಡಿದ ಮಾನವರಿಗೆ ಸ್ವಲ್ಪವೂ ಪಾಪವುಳಿಯುವುದಿಲ್ಲ. ಪಾಪಪರಿಣಾಮವಾಗಿ ಬರುವ ಆಪತ್ತುಗಳು ಸಂಭವಿಸುವುದಿಲ್ಲ. ದಾರಿದ್ರ್ಯ ದುಃಖವುಂಟಾಗುವುದಿಲ್ಲ. ಮತ್ತು ಇಷ್ಟವಸ್ತುವಿನ ಹಾನಿಯು ಸಂಭವಿಸುವುದಿಲ್ಲ.

೫. ಹಾಗು ದೇವೀಮಾಹಾತ್ಮ್ಯವನ್ನು ಕೀರ್ತಿಸಿದ ಮಾನವರಿಗೆ ಶತ್ರುವಿನಿಂದ ಭಯವಿಲ್ಲ. ಕಳ್ಳ-ಕಾಕರ ಭಯವಿಲ್ಲ. ರಾಜಭಯವಿಲ್ಲ. ಅಥವಾ ಶಸ್ತ್ರ, ಬೆಂಕಿ, ಜಲಪ್ರವಾಹಗಳಿಂದಲೂ ಯಾವಾಗಲೂ ಭಯವುಂಟಾಗುವುದಿಲ್ಲ.

೬. ಆದುದರಿಂದ ಮನಸ್ಸಿನ ಏಕಾಗ್ರತೆಯನ್ನು ಹೊಂದಿದ ಮಾನವರಿಂದ ನನ್ನ ಈ ಮಾಹಾತ್ಮ್ಯವು ಭಕ್ತಿಯಿಂದ ಯಾವಾಗಲೂ ಪಠನ ಮತ್ತು ಶ್ರವಣ ಮಾಡತಕ್ಕದ್ದಾಗಿರುವುದು. ನನ್ನ ಮಾಹಾತ್ಮ್ಯವನ್ನು ಪ್ರಕಾಶಪಡಿಸುವ ಚರಿತವ ಶ್ರವಣ ಪಠನಗಳು ಹೆಚ್ಚಾಗಿ ಕ್ಷೇಮವನ್ನು ಕೊಡುವುವು.

ಉಪಸರ್ಗಾನಶೇಷಾಂಸ್ತು ಮಹಾಮಾರೀಸಮುದ್ಭವಾನ್ ।
ತಥಾ ತ್ರಿವಿಧಮುತ್ಪಾತಂ ಮಾಹಾತ್ಮ್ಯಂ ಶಮಯೇನ್ಮಮ ॥೭॥

ಯತ್ರೈತತ್ಪಠ್ಯತೇ ಸಮ್ಯಕ್ ನಿತ್ಯಮಾಯತನೇ ಮಮ ।
ಸದಾ ನ ತದ್ವಿಮೋಕ್ಷ್ಯಾಮಿ ಸಾನ್ನಿಧ್ಯಂ ತತ್ರ ಮೇ ಸ್ಥಿತಮ್ ॥೮॥

ಬಲಿಪ್ರದಾನೇ ಪೂಜಾಯಾಮಗ್ನಿಕಾರ್ಯೇ ಮಹೋತ್ಸವೇ ।
ಸರ್ವಂ ಮಮೈತಚ್ಚರಿತಮುಚ್ಚಾರ್ಯಂ ಶ್ರಾವ್ಯಮೇವ ಚ ॥೯॥

ಜಾನತಾಜಾನತಾ ವಾಪಿ ಬಲಿಂ ಪೂಜಾಂ ತಥಾ ಕೃತಾಮ್ ।
ಪ್ರತೀಚ್ಛಿಷ್ಯಾಮ್ಯಹಂ ಪ್ರೀತ್ಯಾ ವಹ್ನಿಹೋಮಂ ತಥಾ ಕೃತಮ್ ॥೧೦॥

---

೭. ನನ್ನ ಮಾಹಾತ್ಮ್ಯವು ಭಕ್ತಿಯಿಂದ ಶ್ರವಣ-ಪಠನಮಾಡಿದ ಮನುಜಂಗೆ ಮಹಾಮಾರಿಯಿಂದ ಜನಿಸುವ ಎಲ್ಲ ಉಪದ್ರವಗಳನ್ನು ನಿವಾರಿಸು-ವುದು. ಮತ್ತು ಆಧ್ಯಾತ್ಮಿಕ-ಆಧಿಭೌತಿಕ-ಆಧಿದೈವಿಕವೆಂದು ಮೂರುವಿಧವಾದ ಉತ್ಪಾತ ದುಃಖವನ್ನು ನನ್ನ ಮಾಹಾತ್ಮ್ಯವು ನಿವಾರಿಸುವುದು.

೮. ಯಾವ ನನ್ನ ಮೂರ್ತಿಯಿರುವ ಮಂದಿರದಲ್ಲಿ ನಿತ್ಯವೂ ನನ್ನ ಮಾಹಾತ್ಮ್ಯವು ಯಥಾವಿಧಿಯಾಗಿ ಪಠಿಸಲ್ಪಡುವುದೋ ಆ ಮಂದಿರವನ್ನು ನಾನು ಎಂದಿಗೂ ಬಿಡುವುದಿಲ್ಲ. ಸರ್ವಕಾಲದಲ್ಲಿಯೂ ನನ್ನ ಸಾನ್ನಿಧ್ಯವು ಆ ಮಂದಿರದಲ್ಲಿ ಇರುವುದು.

೯. ಬಲಿಯಾಗಿ ಪಶುವನ್ನು ಸಮರ್ಪಿಸುವ ಸಂದರ್ಭದಲ್ಲಿ, ಪುಷ್ಪಾದಿ ಉಪಚಾರಗಳನ್ನರ್ಪಿಸಿ ಪೂಜಿಸುವ ಸಮಯದಲ್ಲಿ, ಮೂಲಾಮಂತ್ರ ಪುರಶ್ಚರ-ಣಾಂಗವಾದ ಅಗ್ನಿಕಾರ್ಯದಲ್ಲಿ ಮತ್ತು ಆಯಾಯ ಮಾಸಗಳ ಮಹೋತ್ಸವ-ಗಳಲ್ಲಿ ನನ್ನ ಸಮಸ್ತ ಚರಿತ್ರವನ್ನೂ ಪಠಿಸಬೇಕು ಮತ್ತು ಶ್ರವಣಮಾಡಬೇಕು.

೧೦. ಗುರೂಪದೇಶದಿಂದ ತಿಳಿಯಬೇಕಾದ ಹೋಮ-ಅರ್ಚನಗಳ ಕ್ರಮವನ್ನು ತಿಳಿದ ಅಥವಾ ತಿಳಿಯದ ಪುರುಷನು ಮಾಡಿರುವ ಬಲಿಸಮರ್ಪಣೆ, ಉಪಚಾರಪೂಜೆ ಮತ್ತು ಅಗ್ನಿಕಾರ್ಯರೂಪವಾದ ಹೋಮ–ಇವುಗಳನ್ನು ನಾನು ಪ್ರೀತಿಯಿಂದ ಸ್ವೀಕರಿಸುತ್ತೇನೆ.

**ಶರತ್ಕಾಲೇ ಮಹಾಪೂಜಾ ಕ್ರಿಯತೇ ಯಾ ಚ ವಾರ್ಷಿಕೀ ।**
**ತಸ್ಯಾಂ ಮಮೈತನ್ಮಾಹಾತ್ಮ್ಯಂ ಶ್ರುತ್ವಾ ಭಕ್ತಿಸಮನ್ವಿತಃ ॥೧೧॥**

**ಸರ್ವಬಾಧಾವಿನಿರ್ಮುಕ್ತೋ ಧನಧಾನ್ಯಸಮನ್ವಿತಃ ।**
**ಮನುಷ್ಯೋ ಮತ್ಪ್ರಸಾದೇನ ಭವಿಷ್ಯತಿ ನ ಸಂಶಯಃ ॥೧೨॥**

**ಶ್ರುತ್ವಾ ಮಮೈತನ್ಮಾಹಾತ್ಮ್ಯಂ ತಥೋತ್ಪತ್ತೀಃ ಪೃಥಕ್ ಶುಭಾಃ ।**
**ಪರಾಕ್ರಮಾಂಶ್ಚ ಯುದ್ಧೇಷು ಜಾಯತೇ ನಿರ್ಭಯಃ ಪುಮಾನ್ ॥೧೩॥**

**ರಿಪವಃ ಸಂಕ್ಷಯಂ ಯಾನ್ತಿ ಕಲ್ಯಾಣಂ ಚೋಪಪದ್ಯತೇ ।**
**ನನ್ದತೇ ಚ ಕುಲಂ ಪುಂಸಾಂ ಮಾಹಾತ್ಮ್ಯಂ ಮಮ ಶೃಣ್ವತಾಮ್ ॥೧೪॥**

---

೧೧. ಪ್ರತಿವರ್ಷದಲ್ಲಿಯೂ ಶರತ್ಕಾಲದಲ್ಲಿ ವಿಶೇಷವಾಗಿ ಮಹಾಪೂಜೆಯನ್ನು ಮಾಡಿ ವರ್ಷೋತ್ಸವವನ್ನು ಆಚರಿಸಬೇಕು. ಆಗ ಭಕ್ತಿಯಿಂದ ಕೂಡಿ ಚರಿತ್ರತ್ರಯದಿಂದ ಕೂಡಿದ ನನ್ನ ಮಾಹಾತ್ಮ್ಯವನ್ನು ಶ್ರವಣಮಾಡಬೇಕು.

೧೨. ಹಾಗೆ ಭಕ್ತಿಯಿಂದ ಕೂಡಿ ಮಾಹಾತ್ಮ್ಯವನ್ನು ಶ್ರವಣ ಮಾಡಿದ ಮಾನವನು ಸಮಸ್ತ ಬಾಧೆಗಳಿಂದ ಬಿಡಲ್ಪಟ್ಟವನೂ ಮತ್ತು ಧನ-ಧಾನ್ಯ ಸಮೃದ್ಧಿಯುಳ್ಳವನೂ ಆಗಿ ನನ್ನ ಅನುಗ್ರಹದಿಂದ ಸುಖಭೋಗಿಯಾಗುವನು. ಸಂಶಯವಿಲ್ಲ.

೧೩. ಮಾನವನು ಸಮಗ್ರವಾಗಿ ನನ್ನ ಮಾಹಾತ್ಮ್ಯವನ್ನು ಶ್ರವಣ ಮಾಡಿ, ಅಲ್ಲಲ್ಲಿ ಪ್ರತಿಪಾದಿಸುವ ನನ್ನ ಉತ್ಪತ್ತಿಗಳನ್ನು ಕೇಳಿ ಹಾಗು ರಾಕ್ಷಸರೊಡನೆ ಯುದ್ಧಪ್ರಸಂಗಗಳಲ್ಲಿ ವರ್ಣಿಸಿದ ಪರಾಕ್ರಮಗಳನ್ನು ಭಾವಿಸಿ ಪಾವನನಾದವನು ನಿರ್ಭಯನಾಗುವನು.

೧೪. ಮತ್ತು ಆಸ್ತಿಕತೆಯಿಂದ ನನ್ನ ಮಾಹಾತ್ಮ್ಯವನ್ನು ಶ್ರವಣ ಮಾಡಿದ ಮಾನವರಿಗೆ ಶತ್ರುಗಳು ಕ್ಷಯಿಸಿಹೋಗುವರು. ಕಲ್ಯಾಣಪರಂಪರೆಯು ಉಂಟಾಗುವುದು. ಮತ್ತು ವಂಶವು ಸುಖ-ಸಂತೋಷಗಳಿಂದ ಮೆರೆದು ವೃದ್ಧಿ-ಹೊಂದುವುದು.

ಶಾಂತಿಕರ್ಮಣಿ ಸರ್ವತ್ರ ತಥಾ ದುಃಸ್ವಪ್ನದರ್ಶನೇ ।
ಗ್ರಹಪೀಡಾಸು ಚೋಗ್ರಾಸು ಮಾಹಾತ್ಮ್ಯಂ ಶೃಣುಯಾನ್ಮಮ ॥೧೫॥

ಉಪಸರ್ಗಾಃ ಶಮಂ ಯಾಂತಿ ಗ್ರಹಪೀಡಾಶ್ಚ ದಾರುಣಾಃ ।
ದುಃಸ್ವಪ್ನಂ ಚ ನೃಭಿರ್ದೃಷ್ಟಂ ಸುಸ್ವಪ್ನಮುಪಜಾಯತೇ ॥೧೬॥

ಬಾಲಗ್ರಹಾಭಿಭೂತಾನಾಂ ಬಾಲಾನಾಂ ಶಾಂತಿಕಾರಕಮ್ ।
ಸಙ್ಘಾತಭೇದೇ ಚ ನೃಣಾಂ ಮೈತ್ರೀಕರಣಮುತ್ತಮಮ್ ॥೧೭॥

ದುರ್ವೃತ್ತಾನಾಮಶೇಷಾಣಾಂ ಬಲಹಾನಿಕರಂ ಪರಮ್ ।
ರಕ್ಷೋಭೂತಪಿಶಾಚಾನಾಂ ಪಠನಾದೇವ ನಾಶನಮ್ ॥೧೮॥

---

೧೫. ಪೀಡಾ ಪರಿಹಾರಾರ್ಥವಾಗಿ ಮಾಡುವ ಶಾಂತಿಕರ್ಮ, ಕೆಟ್ಟ ಸ್ವಪ್ನಗಳನ್ನು ಕಂಡ ಭೀತಿಪರಿಹಾರ, ಮತ್ತು ಅತ್ಯುಗ್ರವಾದ ದುಷ್ಟಗ್ರಹಗಳಿಂದ ಸಂಭವಿಸುವ ಪೀಡಾಪರಿಹಾರ ಕರ್ಮಗಳಲ್ಲಿ ನನ್ನ ಮಾಹಾತ್ಮ್ಯವನ್ನು ಶ್ರವಣ ಮಾಡಬೇಕು. ಇದರಿಂದ ಶಾಂತಿಯಾಗುವುದು.

೧೬. ಮಾಹಾತ್ಮ್ಯವನ್ನು ಶ್ರವಣ ಮಾಡುವುದರಿಂದ ಸಮಸ್ತ ಪೀಡೆಗಳು ಪರಿಹಾರವಾಗುವವು. ಭಯಂಕರವಾದ ಗ್ರಹಪೀಡೆಗಳು ಶಮನವಾಗುವುವು. ಮತ್ತು ಮಾನವರು ಕಂಡ ದುಸ್ವಪ್ನವು ಸುಸ್ವಪ್ನದ ಫಲವನ್ನು ಕೊಡುವಂತಾಗುವುದು.

೧೭. ಬಾಲಕರನ್ನು ಪೀಡಿಸುವ ಪೂತನಾ ಮುಂತಾದ ದುರ್ದೇವತೆಗಳಿಂದ ಶೋಷಣ ಮುಂತಾದ ವಿಕಾರವು ಪ್ರಾಪ್ತವಾದ ಸಂದರ್ಭದಲ್ಲಿ ಮಾಹಾತ್ಮ್ಯವನ್ನು ಶ್ರವಣ ಮಾಡಿದರೆ ಪೀಡಾಪರಿಹಾರವಾಗುವುದು. ಒಂದು ಕೆಲಸದಲ್ಲಿ ಮೈತ್ರಿಯುಂಟಾದ ಸ್ನೇಹದ ಗುಂಪಿನಲ್ಲಿ ಒಡಕು ಉಂಟಾದರೆ ಮತ್ತೆ ಮೈತ್ರಿಯನ್ನು ಉಂಟುಮಾಡುವುದು.

೧೮. ನನ್ನ ಮಾಹಾತ್ಮ್ಯದ ಶ್ರವಣವು ದುರ್ಮಾರ್ಗದಲ್ಲಿ ನಡೆಯತಕ್ಕ ಎಲ್ಲ ಹಿಂಸಕ ಜನರ ಬಲವನ್ನು ಕುಗ್ಗಿಸುವುದು. ಮತ್ತು ರಾಕ್ಷಸ-ಭೂತ-ಪ್ರೇತ-ಪಿಶಾಚ ಮುಂತಾದುವುಗಳನ್ನು ಮಾಹಾತ್ಮ್ಯ ಪಠನ ಮಾತ್ರವು ನಾಶಮಾಡುವುದು.

ಸರ್ವಂ ಮಮೈತನ್ಮಾಹಾತ್ಮ್ಯಂ ಮಮ ಸನ್ನಿಧಿಕಾರಕಮ್ ||೧೯||

ಪಶುಪುಷ್ಪಾರ್ಘ್ಯಧೂಪೈಶ್ಚ ಗನ್ಧದೀಪೈಸ್ತಥೋತ್ತಮೈಃ ।
ವಿಪ್ರಾಣಾಂ ಭೋಜನೈರ್ಹೋಮೈಃ ಪ್ರೋಕ್ಷಣೀಯೈರಹರ್ನಿಶಮ್ ||೨೦||

ಅನ್ಯೈಶ್ಚ ವಿವಿಧೈರ್ಭೋಗೈಃ ಪ್ರದಾನೈರ್ವತ್ಸರೇಣ ಯಾ ।
ಪ್ರೀತಿರ್ಮೇ ಕ್ರಿಯತೇ ಸಾಸ್ಮಿನ್ ಸಕೃದುಚ್ಚರಿತೇ ಶ್ರುತೇ ||೨೧||

ಶ್ರುತಂ ಹರತಿ ಪಾಪಾನಿ ತಥಾರೋಗ್ಯಂ ಪ್ರಯಚ್ಛತಿ ।
ರಕ್ಷಾಂ ಕರೋತಿ ಭೂತೇಭ್ಯೋ ಜನ್ಮನಾಂ ಕೀರ್ತನಂ ಮಮ ||೨೨||

---

೧೯. ಮೂರು ಚರಿತ್ರ ಭಾಗಗಳಿಂದ ಕೂಡಿದ ನನ್ನ ಮಾಹಾತ್ಮ್ಯ ಕೀರ್ತನವು ಆಯಾಯ ಸ್ಥಳದಲ್ಲಿ ನನ್ನ ಸನ್ನಿಧಿಯನ್ನು ಉಂಟುಮಾಡುವುದು. ಮತ್ತು ಭಕ್ತರಿಗೆ ಉತ್ತಮವಾದ ನಿಧಿಸಂಪತ್ತನ್ನು ಕೊಡುವುದು.

೨೦. ಪಶುಬಲಿಯನ್ನು ಅರ್ಪಿಸುವುದು, ಅರ್ಘ್ಯ-ಗಂಧ-ಪುಷ್ಪ-ಧೂಪ-ದೀಪ ಮುಂತಾದ ಉತ್ತಮೋಪಚಾರಗಳನ್ನು ಸಮರ್ಪಿಸಿ ಪೂಜಿಸುವುದು, ಬ್ರಾಹ್ಮಣ ಭೋಜನ, ಹೋಮ ಮತ್ತು ಹಗಲು-ರಾತ್ರಿವೇಳೆಗಳಲ್ಲಿ ಸೇವಾರೂಪವಾಗಿ ಅರ್ಪಿಸುವ ನೃತ್ಯ-ಗೀತಾದಿಗಳಿಂದ ನನಗೆ ತೃಪ್ತಿಯಾಗುವುದು.

೨೧. ಮತ್ತು ಇನ್ನೂ ಅನೇಕವಿಧವಾದ ವಸ್ತ್ರಾಲಂಕಾರ ಪೂಜೆ ಮುಂತಾದ ಭೋಗ ಸಮರ್ಪಣ ಮತ್ತು ವಿಶೇಷವಾಗಿ ಆಚರಿಸುವ ದಾನಕರ್ಮ–ಇವುಗಳನ್ನು ಒಂದು ಸಂವತ್ಸರ ಪೂರ್ತಿಯಾಗಿ ಆಚರಿಸಿದರೆ ನನಗೆ ಯಾವ ಪ್ರೀತಿಯುಂಟಾಗುವುದೊ ಆ ಪ್ರೀತಿಯು ಈ ಮಾಹಾತ್ಮ್ಯವನ್ನು ಒಂದುಸಲ ಶ್ರವಣಮಾಡುವುದರಿಂದ ಮಾತ್ರವೇ ಉಂಟಾಗುವುದು.

೨೨. ಆಯಾಯ ನಿಮಿತ್ತಗಳಿಂದ ಆಗುವ ನನ್ನ ಉತ್ಪತ್ತಿಗಳ ಚರಿತ್ರ ಶ್ರವಣವು ಪಾಪಗಳನ್ನು ದೂರಮಾಡುವುದು. ಆರೋಗ್ಯವನ್ನು ಕೊಡುವುದು. ಮತ್ತು ನನ್ನ ಚರಿತ್ರದ ಕೀರ್ತನವು ಭೂತಗಳಿಂದ ರಕ್ಷೆಯನ್ನು ನೀಡುವುದು.

ಯುದ್ಧೇಷು ಚರಿತಂ ಯನ್ಮೇ ದುಷ್ಟದೈತ್ಯನಿಬರ್ಹಣಮ್ ।
ತಸ್ಮಿಞ್ಛ್ರುತೇ ವೈರಿಕೃತಂ ಭಯಂ ಪುಂಸಾಂ ನ ಜಾಯತೇ ॥೨೩॥

ಯುಷ್ಮಾಭಿಃ ಸ್ತುತಯೋ ಯಾಶ್ಚ ಯಾಶ್ಚ ಬ್ರಹ್ಮರ್ಷಿಭಿಃ ಕೃತಾಃ ।
ಬ್ರಹ್ಮಣಾ ಚ ಕೃತಾ ಯಾಸ್ತಾಃ ಪ್ರಯಚ್ಛನ್ತಿ ಶುಭಾಂ ಗತಿಮ್॥೨೪॥

ಅರಣ್ಯೇ ಪ್ರಾನ್ತರೇ ವಾಪಿ ದಾವಾಗ್ನಿಪರಿವಾರಿತಃ ।
ದಸ್ಯುಭಿರ್ವಾ ವೃತಃ ಶೂನ್ಯೇ ಗೃಹೀತೋ ವಾಪಿ ಶತ್ರುಭಿಃ ॥೨೫॥

ಸಿಂಹವ್ಯಾಘ್ರಾನುಯಾತೋ ವಾ ವನೇ ವಾ ವನಹಸ್ತಿಭಿಃ ।
ರಾಜ್ಞಾ ಕ್ರುದ್ಧೇನ ಚಾಜ್ಞಪ್ತೋ ವಧ್ಯೋ ಬನ್ಧಗತೋಽಪಿ ವಾ॥೨೬॥

---

೨೩. ಯುದ್ಧ ಪ್ರಸಂಗಗಳಲ್ಲಿ ದುಷ್ಟದೈತ್ಯರನ್ನು ಸಂಹರಿಸುವ ಚರಿತ್ರ ಭಾಗದ ಶ್ರವಣವು ಮಾನವರಿಗೆ ವೈರಿಗಳಿಂದ ಸಂಭವಿಸುವ ಭಯವನ್ನು ಪರಿಹಾರ ಮಾಡುವುದು.

೨೪. ಮತ್ತು ಮಾಹಾತ್ಮ್ಯದಲ್ಲಿ ಸೇರಿದ ನಿಮ್ಮಿಂದ ಮಾಡಲ್ಪಟ್ಟಿರುವ ಸ್ತೋತ್ರಗಳು, ಬ್ರಹ್ಮರ್ಷಿಗಳು ಮಾಡಿರುವ ಸ್ತುತಿಪಾಠಗಳು ಮತ್ತು ಬ್ರಹ್ಮ ದೇವನು ಮಾಡಿದ ಸ್ತೋತ್ರಗಳು—ಇವು ಪಠಿಸಿದ ಮಾನವರಿಗೆ ಶುಭಗತಿಯನ್ನು ಕೊಡುವುವು.

೨೫. ಅರಣ್ಯ ಮತ್ತು ನಿರ್ಜನದೂರಪ್ರದೇಶಗಳಲ್ಲಿ ಸಿಕ್ಕಿಕೊಂಡಿರುವ, ಕಾಡುಕಿಚ್ಚಿನಿಂದ ಆವರಿಸಲ್ಪಟ್ಟಿರುವ, ಕಳ್ಳ-ಕಾಕರಿಂದ ಸುತ್ತಲ್ಪಟ್ಟಿರುವ ಅಥವಾ ನಿರ್ಜನಪ್ರದೇಶದಲ್ಲಿ ಶತ್ರುಗಳಿಂದ ಹಿಡಿಯಲ್ಪಟ್ಟಿರುವ ಸಮಯದಲ್ಲಿ ಕೂಡ ನನ್ನ ಮಾಹಾತ್ಮ್ಯಕೀರ್ತನವು ಪೀಡೆಯನ್ನು ಪರಿಹರಿಸುವುದು.

೨೬. ಅಥವಾ ಕಾಡಿನಲ್ಲಿ ಸಿಂಹ, ಹುಲಿ, ಕಾಡಾನೆಗಳು ಅಟ್ಟಿಸಿಕೊಂಡು ಬಂದ ಭಯಪ್ರಸಂಗ ಮತ್ತು ರಾಜನು ಕೋಪಗೊಂಡು ಬಂಧನ-ಮರಣಗಳನ್ನು ಆಜ್ಞಾಪಿಸಿ ಶಿಕ್ಷೆಗೆ ಗುರಿಯಾಗಿರುವ ಪ್ರಸಂಗಗಳಲ್ಲಿ ನನ್ನ ಮಾಹಾತ್ಮ್ಯಕೀರ್ತನವು ಅಭಯವನ್ನು ಕೊಡುವುದು.

ಆಘೂರ್ಣಿತೋ ವಾ ವಾತೇನ ಸ್ಥಿತಃ ಪೋತೇ ಮಹಾರ್ಣವೇ ।
ಪತತ್ಸು ಚಾಪಿ ಶಸ್ತ್ರೇಷು ಸಙ್ಗ್ರಾಮೇ ಭೃಶದಾರುಣೇ ॥೨೭॥

ಸರ್ವಾಬಾಧಾಸು ಘೋರಾಸು ವೇದನಾಭ್ಯರ್ದಿತೋಽಪಿ ವಾ ।
ಸ್ಮರನ್ಮಮೈತಚ್ಚರಿತಂ ನರೋ ಮುಚ್ಯೇತ ಸಙ್ಕಟಾತ್ ॥೨೮॥

ಮಮ ಪ್ರಭಾವಾತ್ಸಿಂಹಾದ್ಯಾ ದಸ್ಯವೋ ವೈರಿಣಸ್ತಥಾ ।
ದೂರಾದೇವ ಪಲಾಯನ್ತೇ ಸ್ಮರತಶ್ಚರಿತಂ ಮಮ ॥೨೯॥

ಋಷಿರುವಾಚ :—

ಇತ್ಯುಕ್ತ್ವಾ ಸಾ ಭಗವತೀ ಚಣ್ಡಿಕಾ ಚಣ್ಡವಿಕ್ರಮಾ ।
ಪಶ್ಯತಾಮೇವ ದೇವಾನಾಂ ತತ್ರೈವಾನ್ತರಧೀಯತ ॥೩೦॥

---

೨೭. ಮತ್ತು ಹಡಗಿನಲ್ಲಿ ಪ್ರಯಾಣಮಾಡುವಾಗ ಬಿರುಗಾಳಿಯಿಂದ ಹಡಗು ಸಮುದ್ರದಲ್ಲಿ ಮುಳುಗಿಹೋಗುವಂತಹ ಕಷ್ಟಪ್ರಸಂಗದಲ್ಲಿ, ಅಥವಾ ಅತಿಭಯಂಕರವಾದ ರಣರಂಗದಲ್ಲಿ ಶಸ್ತ್ರಗಳು ಮೇಲೆ ಬೀಳುತ್ತಿರುವಂತಹ ಪ್ರಸಂಗದಲ್ಲಿ ನನ್ನ ಮಾಹಾತ್ಮ್ಯಕೀರ್ತನವು ವಿಪತ್ತನ್ನು ದೂರಮಾಡುವುದು.

೨೮. ಇನ್ನೂ ಘೋರವಾದ ಸಮಸ್ತ ಪೀಡೆಗಳಲ್ಲಿಯೂ ಹಾಗು ಸಹಿಸಲಾಗದ ತೀವ್ರವಾದ ವೇದನೆಗಳಲ್ಲಿಯೂ ನನ್ನ ಮಾಹಾತ್ಮ್ಯ ಚರಿತ್ರವನ್ನು ಸ್ಮರಣಮಾಡಿದ ಮಾನವನು ಸಂಕಟದಿಂದ ಬಿಡುಗಡೆಯನ್ನು ಹೊಂದುವನು.

೨೯. ನನ್ನ ಚರಿತ್ರೆಯನ್ನು ಸ್ಮರಣಮಾಡುತ್ತಿದ್ದ ಮಾನವನ ಬಳಿಯಿಂದ ನನ್ನ ಪ್ರಭಾವದಿಂದ ಪೀಡಿಸಲು ಬಂದ ಸಿಂಹ ಮುಂತಾದ ಕ್ರೂರಜಂತು, ಕಳ್ಳರು ಮತ್ತು ಶತ್ರುಗಳು ದೂರದಿಂದಲೇ ಓಡಿಹೋಗುವರು.

ಸುಮೇಧ ಋಷಿಯು ಹೇಳಿದನು :—

೩೦. ಅಖಂಡೈಶ್ವರ್ಯಸಂಪನ್ನಳೂ, ಪ್ರಚಂಡವಾದ ವಿಕ್ರಮವುಳ್ಳವಳೂ ಆದ ಚಂಡಿಕಾದೇವಿಯು ಹೀಗೆಂದು ಹೇಳಿ ದೇವತೆಗಳು ನೋಡುತ್ತಿರುವ ಹಾಗೆ ಅಲ್ಲಿಯೆ ಅಂತರ್ಧಾನ ಹೊಂದಿದಳು.

§

ತೇಽಪಿ ದೇವ್ಯಾ ನಿರಾತಙ್ಕಾಃ ಸ್ವಾಧಿಕಾರಾನ್ಯಥಾ ಪುರಾ ।
ಯಜ್ಞಭಾಗಭುಜಃ ಸರ್ವೇ ಚಕ್ರುರ್ವಿನಿಹತಾರಯಃ ॥೩೧॥

ದೈತ್ಯಾಶ್ಚ ದೇವ್ಯಾ ನಿಹತೇ ಶುಮ್ಭೇ ದೇವರಿಪೌ ಯುಧಿ ॥೩೨॥

ಜಗದ್ವಿಧ್ವಂಸಕೇ ತಸ್ಮಿನ್ಮಹೋಗ್ರೇಽತುಲವಿಕ್ರಮೇ ।
ನಿಶುಮ್ಭೇ ಚ ಮಹಾವೀರ್ಯೇ ಶೇಷಾಃ ಪಾತಾಲಮಾಯಯುಃ ॥೩೩॥

ಏವಂ ಭಗವತೀ ದೇವೀ ಸಾ ನಿತ್ಯಾಪಿ ಪುನಃ ಪುನಃ ।
ಸಮ್ಭೂಯ ಕುರುತೇ ಭೂಪ ಜಗತಃ ಪರಿಪಾಲನಮ್ ॥೩೪॥

ತಯೈತನ್ಮೋಹ್ಯತೇ ವಿಶ್ವಂ ಸೈವ ವಿಶ್ವಂ ಪ್ರಸೂಯತೇ ।
ಸಾ ಯಾಚಿತಾ ಚ ವಿಜ್ಞಾನಂ ತುಷ್ಟಾ ಋದ್ಧಿಂ ಪ್ರಯಚ್ಛತಿ ॥೩೫॥

---

೩೧. ತರುವಾಯ ಎಲ್ಲ ದೇವತೆಗಳು ನಾಶಹೊಂದಿದ ಶತ್ರುಗಳುಳ್ಳವರಾಗಿ ಅಡ್ಡಿ-ಆತಂಕಗಳಿಲ್ಲದಂತೆ ಯಜ್ಞಗಳ ಹವಿರ್ಭಾಗವನ್ನು ಸ್ವೀಕರಿಸುವವರಾಗಿ ಮತ್ತೆ ಮೊದಲಿನಂತೆ ತಮ್ಮ ತಮ್ಮ ಅಧಿಕಾರಗಳನ್ನು ನೆರವೇರಿಸಿದರು.

೩೨. ದೇವಿಯಿಂದ ದೇವತೆಗಳ ಶತ್ರುವಾದ ಶುಂಭಾಸುರನು ರಣರಂಗದಲ್ಲಿ ವಧಿಸಲ್ಪಡಲು ದೈತ್ಯರು ತಮ್ಮ ರಾಜನನ್ನು ಕಳೆದುಕೊಂಡು ಅನಾಥರಾದರು.

೩೩. ಹಾಗು ಜಗತ್ತನ್ನು ಧ್ವಂಸಮಾಡುವ, ನಿರುಪಮವಾದ ವಿಕ್ರಮವುಳ್ಳ ಮತ್ತು ಅತ್ಯುಗ್ರನಾದ ನಿಶುಂಭಾಸುರನೂ ದೇವಿಯಿಂದ ವಧಿಸಲ್ಪಡಲು ಇತರ ದೈತ್ಯರು ಪಾತಾಲಲೋಕಕ್ಕೆ ಧಾವಿಸಿದರು.

೩೪. ಸುರಥಮಹಾರಾಜನೇ! ಷಡ್ಗುಣೈಶ್ವರ್ಯಗಳಿಂದ ಕೂಡಿದ ದೇವಿಯು ತಾನು ನಿತ್ಯಳಾಗಿದ್ದರೂ ಆಯಾಯ ನಿಮಿತ್ತಗಳಿಂದ ಮತ್ತೆ ಮತ್ತೆ ಜನ್ಮವೆತ್ತಿ ಜಗತ್ತಿನ ಪಾಲನೆಯನ್ನು ಮಾಡುವಳು.

೩೫. ಆ ದೇವಿಯಿಂದ ಈ ವಿಶ್ವವು ಭ್ರಾಂತಿಗೊಳಿಸಲ್ಪಡುವುದು. ಆ ದೇವಿಯು ವಿಶ್ವವನ್ನು ಸೃಜಿಸುವಳು. ಆ ದೇವಿಯು ಪ್ರಾರ್ಥಿಸಲ್ಪಟ್ಟು ತತ್ತ್ವಜ್ಞಾನವನ್ನು ಕೊಡುವಳು ಮತ್ತು ಆ ದೇವಿಯು ಸಂತೋಷಹೊಂದಿ ಸಂಪತ್ತಿನ ಸಮೃದ್ಧಿಯನ್ನು ಕೊಡುವಳು.

ವ್ಯಾಪ್ತಂ ತಯೈತತ್ಸಕಲಂ ಬ್ರಹ್ಮಾಣ್ಡಂ ಮನುಜೇಶ್ವರ ।
ಮಹಾಕಾಲ್ಯಾ ಮಹಾಕಾಲೇ ಮಹಾಮಾರೀಸ್ವರೂಪಯಾ ॥೩೬॥

ಸೈವ ಕಾಲೇ ಮಹಾಮಾರೀ ಸೈವ ಸೃಷ್ಟಿರ್ಭವತ್ಯಜಾ ।
ಸ್ಥಿತಿಂ ಕರೋತಿ ಭೂತಾನಾಂ ಸೈವ ಕಾಲೇ ಸನಾತನೀ ॥೩೭॥

ಭವಕಾಲೇ ನೃಣಾಂ ಸೈವ ಲಕ್ಷ್ಮೀರ್ವೃದ್ಧಿಪ್ರದಾ ಗೃಹೇ ।
ಸೈವಾಭಾವೇ ತಥಾಲಕ್ಷ್ಮೀರ್ವಿನಾಶಾಯೋಪಜಾಯತೇ ॥೩೮॥

ಸ್ತುತಾ ಸಮ್ಪೂಜಿತಾ ಪುಷ್ಪೈರ್ಗನ್ಧಧೂಪಾದಿಭಿಸ್ತಥಾ ।
ದದಾತಿ ವಿತ್ತಂ ಪುತ್ರಾಂಶ್ಚ ಮತಿಂ ಧರ್ಮೇ ಗತಿಂ ಶುಭಾಮ್ ॥೩೯॥

ಇತಿ ಶ್ರೀ ಮಾರ್ಕಣ್ಡೇಯ ಮಹಾಪುರಾಣೇ ದೇವೀಮಾಹಾತ್ಮ್ಯೇ ಶುಮ್ಭ-ನಿಶುಮ್ಭವಧೋ ನಾಮ ಏಕೋನನವತಿತಮೋಽಧ್ಯಾಯಃ

---

೩೬. ಎಲೈ ಸುರಥಮಹಾರಾಜನೇ! ಮಹತ್ತಾದ ಪ್ರಲಯಕಾಲದಲ್ಲಿ ಮಹಾಮಾರಿಯ ಸ್ವರೂಪದಿಂದಿರುವ, ತಮೋಗುಣದಿಂದ ತುಂಬಿದ ಮಹಾ-ಕಾಳೀದೇವಿಯಿಂದ ಸಕಲ ಬ್ರಹ್ಮಾಂಡವು ವ್ಯಾಪಿಸಲ್ಪಟ್ಟಿರುವುದು.

೩೭. ಮತ್ತು ಜನ್ಮವಿಲ್ಲದವಳೂ ನಿತ್ಯಳೂ ಆದ ಮಹಾದೇವಿಯು ಪ್ರಲಯಕಾಲದಲ್ಲಿ ತಮೋಗುಣದ ಪ್ರಾಧಾನ್ಯದಿಂದ ಮಹಾಮಾರಿಯಾಗುವಳು. ಸೃಷ್ಟಿಸಮಯದಲ್ಲಿ ರಜೋಗುಣಮಯಳಾಗಿ ಸೃಷ್ಟಿಶಕ್ತಿಯಾಗುವಳು. ಮತ್ತು ಮಿಕ್ಕಸಮಯದಲ್ಲಿ ಸ್ಥಿತಿಕಾಲದಲ್ಲಿ ಸತ್ತ್ವಗುಣದಿಂದ ಸ್ಥಿತಿ ಕಾರಣಳಾಗುವಳು.

೩೮. ಮಹಾದೇವಿಯು ತನ್ನ ಸನ್ನಿಧಿಯನ್ನು ಇಟ್ಟಿರುವ ಕಾಲದಲ್ಲಿ ಮಾನವರಿಗೆ ಲಕ್ಷ್ಮೀರೂಪಳಾಗಿ ಮನೆಯಲ್ಲಿ ವೃದ್ಧಿಯನ್ನು ಉಂಟುಮಾಡುವಳು. ಸನ್ನಿಧಿಯ ಅಭಾವಕಾಲದಲ್ಲಿ ಅಲಕ್ಷ್ಮೀರೂಪಳಾಗಿ ವಿನಾಶಕ್ಕೆ ಕಾರಣಳಾಗುವಳು.

೩೯. ಅಂತಹ ಮಹಾದೇವಿಯು ಸ್ತುತಿಮಾಡಲ್ಪಟ್ಟವಳೂ ಮತ್ತು ಗಂಧ-ಧೂಪ ಮುಂತಾದ ಉಪಚಾರಗಳಿಂದ ಅರ್ಚಿಸಲ್ಪಟ್ಟವಳೂ ಆಗಿ ಧನವನ್ನೂ ಪುತ್ರಸಂತತಿಯನ್ನೂ, ಧರ್ಮಶ್ರದ್ಧೆಯನ್ನೂ ಮತ್ತು ಮಂಗಳಕರವಾದ ಗತಿಯನ್ನೂ ಕೊಡುವಳು.

ಮಾರ್ಕಂಡೇಯ ಮಹಾಪುರಾಣದಲ್ಲಿ ಎಂಭತ್ತೊಂಭತ್ತನೆಯ ಅಧ್ಯಾಯವು ಮುಗಿದುದು.



|| ಓಂ ಶ್ರೀ ದುರ್ಗಾಯೈ ನಮಃ ||

# ಮಾರ್ಕಂಡೇಯ ಪುರಾಣಂ

## ನವತಿತಮೋಽಧ್ಯಾಯಃ

### (ಸಾವರ್ಣಿಕಮನ್ವನ್ತರೋಪಸಂಹಾರಃ)

**ಋಷಿರುವಾಚ :—**

**ಏತತ್ತೇ ಕಥಿತಂ ಭೂಪ ದೇವೀಮಾಹಾತ್ಮ್ಯಮುತ್ತಮಮ್ ।**
**ಏವಂಪ್ರಭಾವಾ ಸಾ ದೇವೀ ಯಯೇದಂ ಧಾರ್ಯತೇ ಜಗತ್ ||೧||**

**ವಿದ್ಯಾ ತಥೈವ ಕ್ರಿಯತೇ ಭಗವದ್ವಿಷ್ಣುಮಾಯಯಾ ||೨||**

---

## ತೊಂಭತ್ತನೆಯ ಅಧ್ಯಾಯ

ಋಷಿಯು ಹೀಗೆಂದನು :—

೧. ಎಲೈ ಸುರಥರಾಜನೇ! ಹೀಗೆ ನಿನಗೆ ಉತ್ತಮವಾದ ದೇವೀ-ಮಾಹಾತ್ಮ್ಯವು ನನ್ನಿಂದ ಹೇಳಲ್ಪಟ್ಟಿದೆ. ಆ ಮಹಾದೇವಿಯು ಇಂತಹ ಪ್ರಭಾವವುಳ್ಳವಳು. ಅವಳು ಈ ಜಗತ್ತನ್ನು ಧರಿಸಿಕೊಂಡಿರುವಳು.

೨. ಹೀಗೆ ಜಗತ್ತನ್ನು ಧರಿಸಿಕೊಂಡಿರುವವಳೂ, ವಿಷ್ಣುಮಾಯೆಯೆಂದು ವರ್ಣಿಸಲ್ಪಡುವವಳೂ ಆದ ಮಹಾದೇವಿಯು ಉಪನಿಷತ್ತಿನ ರೂಪದಿಂದ ತತ್ತ್ವಜ್ಞಾನವನ್ನು ಕೊಡುವಳು.

ತಥಾ ತ್ವಮೇಷ ವೈಶ್ಯಶ್ಚ ತಥೈವಾನ್ಯೇ ವಿವೇಕಿನಃ ।
ಮೋಹ್ಯನ್ತೇ ಮೋಹಿತಾಶ್ಚೈವ ಮೋಹಮೇಷ್ಯನ್ತಿ ಚಾಪರೇ ॥೩॥

ತಾಮುಪೈಹಿ ಮಹಾರಾಜ ಶರಣಂ ಪರಮೇಶ್ವರೀಮ್ ।
ಆರಾಧಿತಾ ಸೈವ ನೃಣಾಂ ಭೋಗಸ್ವರ್ಗಾಪವರ್ಗದಾ ॥೪॥

ಮಾರ್ಕಣ್ಡೇಯ ಉವಾಚ :—

ಇತಿ ತಸ್ಯ ವಚಃ ಶ್ರುತ್ವಾ ಸುರಥಃ ಸ ನರಾಧಿಪಃ ।
ಪ್ರಣಿಪತ್ಯ ಮಹಾಭಾಗಂ ತಮೃಷಿಂ ಸಂಶಿತವ್ರತಮ್ ॥೫॥

ನಿರ್ವಿಣ್ಣೋಽತಿಮಮತ್ವೇನ ರಾಜ್ಯಾಪಹರಣೇನ ಚ ।
ಜಗಾಮ ಸದ್ಯಸ್ತಪಸೇ ಸ ಚ ವೈಶ್ಯೋ ಮಹಾಮುನೇ ॥೬॥

---

೩. ಮತ್ತು ದೇವಿಯು ವಿವೇಕಿಗಳನ್ನು ಮೋಹಗೊಳಿಸುವಳು. ಮಹಾರಾಜನಾದ ನೀನು ಮತ್ತು ಸಮಾಧಿ ಎಂಬ ಈ ವೈಶ್ಯನು ಮೋಹ ಹೊಂದಿರುವಿರಿ. ಹಾಗು ಇತರ ವಿವೇಕಿಜನರು ಕೂಡ ಮಾಯೆಯಿಂದ ಮೋಹಗೊಳಿಸಲ್ಪಟ್ಟಿರುವರು, ಮೋಹಗೊಳಿಸಲ್ಪಡುತ್ತಿದ್ದಾರೆ. ಮತ್ತು ಮುಂದೆ ಮೋಹಗೊಳಿಸಲ್ಪಡುವರು.

೪. ಮಹಾರಾಜನೇ! ನೀನು ಸರ್ವೇಶ್ವರಿಯಾದ ಮಹಾದೇವಿಯನ್ನು ಶರಣುಹೊಂದು. ಸರ್ವಭಾವಗಳಿಂದ ಆರಾಧಿಸಲ್ಪಟ್ಟ ಮಹಾದೇವಿಯು ಮಾನವರಿಗೆ ಐಹಿಕಸುಖಭೋಗ, ಸ್ವರ್ಗಸುಖ ಮತ್ತು ಮೋಕ್ಷಗಳನ್ನು ಕೊಡುವಳು.

ಮಾರ್ಕಂಡೇಯ ಮುನಿಯು ಹೇಳಿದನು :—

೫. ಮಮತೆಯಿಂದ ಖಿನ್ನನಾದ ಆ ಸುರಥಮಹಾರಾಜನು ಸುಮೇಧ- ಮುನಿಯ ಉಪದೇಶವಾಣಿಯನ್ನು ಕೇಳಿ ಮಹಾತ್ಮನೂ, ಅತಿಕಠಿನವಾದ ತಪಶ್ಚರ್ಯೆಯುಳ್ಳವನೂ ಆದ ಮುನಿಯನ್ನು ಗುರುಭಾವನೆಯಿಂದ ವಂದಿಸಿದನು.

೬. ಕ್ರೌಷ್ಟುಕಿಮುನಿಯೆ! ಸುರಥರಾಜನು ಇದುವರೆಗೆ ಪುತ್ರ- ಮಿತ್ರ- ಪರಿವಾರದಲ್ಲಿದ್ದ ಮಮತ್ವದಿಂದಲೂ, ರಾಜ್ಯಾಪಹಾರದುಃಖದಿಂದಲೂ ಬೇಸರ- ಗೊಂಡವನಾಗಿ ಕೂಡಲೆ ತಪಸ್ಸಿಗೆ ಹೊರಟುಹೋದನು. ಹಾಗು ಆ ವೈಶ್ಯನೂ ತಪಸ್ಸಿಗೆ ಹೋದನು.

ಸನ್ದರ್ಶನಾರ್ಥಮಮ್ಬಾಯಾ ನದೀಪುಲಿನಸಂಸ್ಥಿತಃ ।
ಸ ಚ ವೈಶ್ಯಸ್ತಪಸ್ತೇಪೇ ದೇವೀಸೂಕ್ತಂ ಪರಂ ಜಪನ್ ॥೭॥

ತೌ ತಸ್ಮಿನ್ ಪುಲಿನೇ ದೇವ್ಯಾಃ ಕೃತ್ವಾ ಮೂರ್ತಿಂ ಮಹೀಮಯೀಮ್ ।
ಅರ್ಹಣಾಂ ಚಕ್ರತುಸ್ತಸ್ಯಾಃ ಪುಷ್ಪಧೂಪಾಗ್ನಿತರ್ಪಣೈಃ ॥೮॥

ನಿರಾಹಾರೌ ಯತಾತ್ಮಾನೌ ತನ್ಮನಸ್ಕೌ ಸಮಾಹಿತೌ ।
ದದತುಸ್ತೌ ಬಲಿಂ ಚೈವ ನಿಜಗಾತ್ರಾಸೃಗುಕ್ಷಿತಮ್ ॥೯॥

ಏವಂ ಸಮಾರಾಧಯತೋಸ್ತ್ರಿಭಿರ್ವರ್ಷೈರ್ಯತಾತ್ಮನೋಃ ।
ಪರಿತುಷ್ಟಾ ಜಗದ್ಧಾತ್ರೀ ಪ್ರತ್ಯಕ್ಷಂ ಪ್ರಾಹ ಚಣ್ಡಿಕಾ ॥೧೦॥

---

೭. ಸುರಥಮಹಾರಾಜನು ಮತ್ತು ಸಮಾಧಿವೈಶ್ಯನು ಇಬ್ಬರೂ ಜಗನ್ಮಾತೆಯಾದ ದೇವಿಯ ಸಾಕ್ಷಾತ್ಕಾರಕ್ಕೋಸ್ಕರ ನದಿಯ ಮರಳು ದಿಣ್ಣೆಯಲ್ಲಿ ಕುಳಿತು ಉತ್ತಮವಾದ ದೇವೀಸೂಕ್ತವನ್ನು ಜಪಿಸುತ್ತ ತಪಸ್ಸನ್ನು ಮಾಡಿದರು.

೮. ಆ ರಾಜನು ಮತ್ತು ವೈಶ್ಯನು ಇಬ್ಬರು ನದೀತೀರದ ಮರಳಿನಲ್ಲಿ ಮಣ್ಣಿನಿಂದ ದೇವಿಯ ಮೂರ್ತಿಯನ್ನು ಮಾಡಿಟ್ಟುಕೊಂಡು ಪುಷ್ಪ-ಧೂಪ ಮುಂತಾದ ಉಪಚಾರ ಸಮರ್ಪಣ, ಅಗ್ನಿಹೋಮ, ಮತ್ತು ತರ್ಪಣಗಳಿಂದ ದೇವಿಯ ಆರಾಧನವನ್ನು ಮಾಡಿದರು.

೯. ಇವರಿಬ್ಬರೂ ಆಹಾರವನ್ನು ಸೇವಿಸದಿರುವವರೂ, ವಿಷಯಗಳನ್ನು ವರ್ಜಿಸಿದ ಇಂದ್ರಿಯವರ್ಗವುಳ್ಳವರೂ, ಸ್ಥಿರವಾದ ಮಾನಸವುಳ್ಳವರೂ ಮತ್ತು ಗುರುವಿನಿಂದ ಉಪದೇಶಹೊಂದಿದ ಅರ್ಥದಲ್ಲಿ ತತ್ಪರತೆಯುಳ್ಳವರೂ ಆಗಿ ಆ ದೇವಿಯನ್ನು ಆರಾಧಿಸುತ್ತ ತಮ್ಮ ದೇಹದ ರಕ್ತವನ್ನು ಪ್ರೋಕ್ಷಿಸಿದ ಬಲಿಯನ್ನು ದೇವಿಗೆ ಸಮರ್ಪಿಸಿದರು.

೧೦. ಹೀಗೆ ಜಿತೇಂದ್ರಿಯರಾಗಿ ರಾಜ-ವೈಶ್ಯರಿಬ್ಬರು ದೇವಿಯನ್ನು ಆರಾಧಿಸುತ್ತ ಮೂರು ವರ್ಷಗಳು ಕಳೆಯಲಾಗಿ ಇವರ ಭಕ್ತಿಯ ಆರಾಧನೆಯಿಂದ ಪ್ರಸನ್ನಳಾದವಳೂ ಮತ್ತು ಜಗತ್ಕಾರಣಳೂ ಆದ ಚಂಡಿಕಾದೇವಿಯು ಪ್ರತ್ಯಕ್ಷಳಾಗಿ ಬಂದು ಹೀಗೆ ಹೇಳಿದಳು.

ಶ್ರೀ ದೇವ್ಯುವಾಚ :—

ಯತ್ಪ್ರಾರ್ಥ್ಯತೇ ತ್ವಯಾ ಭೂಪ ತ್ವಯಾ ಚ ಕುಲನನ್ದನ ।
ಮತ್ತಸ್ತತ್ಪ್ರಾಪ್ಯತಾಂ ಸರ್ವಂ ಪರಿತುಷ್ಟಾ ದದಾಮಿ ತತ್ ॥೧೧॥

ಮಾರ್ಕಣ್ಡೇಯ ಉವಾಚ :—

ತತೋ ವವ್ರೇ ನೃಪೋ ರಾಜ್ಯಮವಿಭ್ರಂಶ್ಯನ್ಯಜನ್ಮನಿ ।
ಅತ್ರೈವ ಚ ನಿಜಂ ರಾಜ್ಯಂ ಹತಶತ್ರುಬಲಂ ಬಲಾತ್ ॥೧೨॥

ಸೋಽಪಿ ವೈಶ್ಯಸ್ತತೋ ಜ್ಞಾನಂ ವವ್ರೇ ನಿರ್ವಿಣ್ಣಮಾನಸಃ ।
ಮಮೇತ್ಯಹಮಿತಿ ಪ್ರಾಜ್ಞಃ ಸಙ್ಗವಿಚ್ಯುತಿಕಾರಕಮ್ ॥೧೩॥

---

ದೇವಿಯು ಇಂತೆಂದಳು :—

೧೧. ಎಲೈ, ಮಹಾರಾಜನೇ! ಎಲೈ, ವಂಶವನ್ನು ಆನಂದಗೊಳಿಸುವ ವೈಶ್ಯನೇ! ನಿಮ್ಮಿಂದ ಯಾವ ಇಷ್ಟವು ಪ್ರಾರ್ಥಿಸಲ್ಪಡುವುದೋ ಅವೆಲ್ಲವನ್ನೂ ನೀವು ಹೊಂದುವಿರಿ. ನಿಮ್ಮ ಆರಾಧನೆಯಿಂದ ಸಂತುಷ್ಟಳಾದ ನಾನು ನಿಮ್ಮ ಮನೋರಥವನ್ನು ಕೊಡುವೆನು.

ಮಾರ್ಕಂಡೇಯ ಮುನಿಯು ಹೇಳಿದನು :—

೧೨. ತರುವಾಯ ಸುರಥಮಹಾರಾಜನು ಮುಂದಿನ ಜನ್ಮದಲ್ಲಿ ಭ್ರಂಶವಾಗದಿರುವ ಮನುಪದವಿಯರೂಪವಾದ ರಾಜ್ಯಾಧಿಕಾರವನ್ನು ಕೇಳಿ-ಕೊಂಡನು. ಹಾಗು ಈ ಜನ್ಮದಲ್ಲಿ ಬಲದಿಂದ ಶತ್ರುಗಳನ್ನು ನಿಕ್ಷೇಪಮಾಡಿದ ತನ್ನ ರಾಜ್ಯವನ್ನು ಪ್ರಾರ್ಥಿಸಿದನು.

೧೩. ಪ್ರಜ್ಞಾಸಂಪನ್ನನಾದ ಆ ವೈಶ್ಯನು ವಿರಕ್ತವಾದ ಅಂತಃಕರಣ-ವುಳ್ಳವನಾಗಿ ಅಹಂ-ಮಮ (ತಾನು-ತನ್ನದು) ಎಂಬ ಭಾವನೆಯನ್ನು ಉಂಟು-ಮಾಡುವ ಅಭಿಮಾನವನ್ನು ದೂರಮಾಡುವ ತತ್ತ್ವಜ್ಞಾನವುಂಟಾಗುವಂತೆ ವರವನ್ನು ಬೇಡಿದನು.

ಶ್ರೀ ದೇವ್ಯುವಾಚ :—

ಸ್ವಲ್ಪೈರಹೋಭಿರ್ನೃಪತೇ ಸ್ವಂ ರಾಜ್ಯಂ ಪ್ರಾಪ್ಸ್ಯತೇ ಭವಾನ್ ।
ಹತ್ವಾ ರಿಪೂನಸ್ಖಲಿತಂ ತವ ತತ್ರ ಭವಿಷ್ಯತಿ ॥೧೪॥

ಮೃತಶ್ಚ ಭೂಯಃ ಸಂಪ್ರಾಪ್ಯ ಜನ್ಮ ದೇವಾದ್ವಿವಸ್ವತಃ ।
ಸಾವರ್ಣಿಕೋ ನಾಮ ಮನುರ್ಭವಾನ್ ಭುವಿ ಭವಿಷ್ಯತಿ ॥೧೫॥

ವೈಶ್ಯವರ್ಯ ತ್ವಯಾ ಯಶ್ಚ ವರೋಽಸ್ಮತ್ತೋಽಭಿವಾಂಛಿತಃ ।
ತಂ ಪ್ರಯಚ್ಛಾಮಿ ಸಂಸಿದ್ಧ್ಯೈ ತವ ಜ್ಞಾನಂ ಭವಿಷ್ಯತಿ ॥೧೬॥

ಮಾರ್ಕಣ್ಡೇಯ ಉವಾಚ :—

ಇತಿ ದತ್ತ್ವಾ ತಯೋರ್ದೇವೀ ಯಥಾಭಿಲಷಿತಂ ವರಮ್ ।
ಬಭೂವಾನ್ತರ್ಹಿತಾ ಸದ್ಯೋ ಭಕ್ತ್ಯಾ ತಾಭ್ಯಾಮಭಿಷ್ಟುತಾ ॥೧೭॥

---

ದೇವಿಯು ಇಂತೆಂದಳು :—

೧೪. ಎಲೈ ರಾಜನೇ! ಇನ್ನು ಮುಂದೆ ಸ್ವಲ್ಪ ದಿವಸಗಳಲ್ಲಿಯೇ ನೀನು ನಿನ್ನ ರಾಜ್ಯವನ್ನು ಹೊಂದುತ್ತೀಯೆ. ಮತ್ತು ಶತ್ರುಗಳನ್ನು ಸಂಹಾರ-ಮಾಡಿ ಜಯಶಾಲಿಯಾದ ನಿನ್ನಲ್ಲಿ ರಾಜ್ಯಲಕ್ಷ್ಮಿಯು ಭ್ರಂಶವಾಗದಂತೆ ಸ್ಥಿರವಾಗಿ ಉಳಿಯುವಳು.

೧೫. ಮತ್ತು ಆಯುಷ್ಯವು ಸಮಾಪ್ತಿಯಾಗಿ ಮರಣ ಹೊಂದಿದ ಮೇಲೆ ಮತ್ತೆ ನೀನು ಸೂರ್ಯದೇವನಿಂದ ಜನ್ಮವನ್ನು ಹೊಂದಿ ಭೂಮಿಯಲ್ಲಿ ಸಾವರ್ಣಿಕ ಎಂಬ ಮನುವಾಗಿ ಲೋಕವನ್ನು ರಕ್ಷಿಸುತ್ತೀಯೆ.

೧೬. ಎಲೈ, ಸಾಧುವಾದ ವೈಶ್ಯನೇ! ನನ್ನಲ್ಲಿ ನೀನು ಯಾವ ಇಷ್ಟವಾದ ವರವನ್ನು ಪ್ರಾರ್ಥಿಸಿದೆಯೊ ಆ ವರವನ್ನು ಕೊಟ್ಟಿರುವೆನು. ವರ-ಪ್ರಭಾವದಿಂದ ನಿನಗೆ ಮುಕ್ತಿಯನ್ನು ಕೊಡುವ ತತ್ತ್ವಜ್ಞಾನವು ಲಭಿಸುವುದು.

ಮಾರ್ಕಂಡೇಯ ಮುನಿಯು ಹೇಳಿದನು :—

೧೭. ಮಹಾದೇವಿಯು ಸುರಥ-ವೈಶ್ಯರಿಗೆ ಈ ರೀತಿಯಾಗಿ ಅವರವರಿಗೆ ಇಷ್ಟವಾದ ವರಗಳನ್ನು ಕೊಟ್ಟು ಮತ್ತೆ ಭಕ್ತಿಯಿಂದ ಅವರಿಂದ ಸ್ತುತಿಸಲ್ಪಟ್ಟ ಕೂಡಲೆ ಆ ಸ್ಥಳದಲ್ಲಿ ಅಂತರ್ಧಾನ ಹೊಂದಿದಳು.

**ಏವಂ ದೇವ್ಯಾ ವರಂ ಲಬ್ಧ್ವಾ ಸುರಥಃ ಕ್ಷತ್ರಿಯರ್ಷಭಃ ।**
**ಸೂರ್ಯಾಜ್ಜನ್ಮ ಸಮಾಸಾದ್ಯ ಸಾವರ್ಣಿರ್ಭವಿತಾ ಮನುಃ ॥೧೮॥**

**ಇತಿ ಶ್ರೀ ಮಾರ್ಕಣ್ಡೇಯ ಮಹಾಪುರಾಣೇ ಸೂರ್ಯಸಾವರ್ಣಿಕೇ ಮನ್ವನ್ತರೇ ಶ್ರೀ ದೇವೀಮಾಹಾತ್ಮ್ಯೇ ನವತಿತಮೋಽಧ್ಯಾಯಃ**

(ದೇವೀಮಾಹಾತ್ಮ್ಯಂ ಸಂಪೂರ್ಣಮ್)

---

೧೮. ಈ ರೀತಿಯಾಗಿ ಕ್ಷತ್ರಿಯೋತ್ತಮನಾದ ಸುರಥಮಹಾರಾಜನು ದೇವಿಯಿಂದ ವರವನ್ನು ಹೊಂದಿದನು. ಆ ರಾಜನು ಮತ್ತೆ ತನ್ನ ರಾಜ್ಯಭಾರವನ್ನು ನಿರ್ವಹಿಸಿ ಮರಣಾನಂತರದಲ್ಲಿ ಮತ್ತೆ ಸೂರ್ಯದೇವನಿಂದ ಜನ್ಮವೆತ್ತಿದವನಾಗಿ ಸಾವರ್ಣಿಕನೆಂಬ ಮನುರಾಜನಾಗುವನು.

ಮಾರ್ಕಂಡೇಯ ಮಹಾಪುರಾಣದಲ್ಲಿ ತೊಂಭತ್ತನೆಯ ಅಧ್ಯಾಯವು ಮುಗಿದುದು.

**ದೇವೀಮಾಹಾತ್ಮ್ಯವು ಸಂಪೂರ್ಣವು.**

